# ಸಿದ್ಧ ಸಾಧನ

# - ಬಿಂಬಕಾಂಬುದಕೆ

## ಚಕ್ರಾಬ್ಜ ಮಂಡಲದ ವಿವರಣೆ

(ಶ್ರೀ ವಿಜಯದಾಸಾರ್ಯಕೃತ ಕಂಕಣಾಕಾರ ಸುಳಾದಿ ಆಧಾರಿತ)



**ಕಂಪ್ಯೂಟರ್ ವಿಜ್ಞಾನ ಸರಸ್ಸಿನಲ್ಲಿ ಅರಳಿದ ಪ್ರಪ್ರಥಮ**

**ವಿವರಪೂರ್ಣ ರೇಖಾ ವಿನ್ಯಾಸ ಕುಮುದ**

# ಸಿದ್ಧ ಸಾಧನ - ಬಿಂಬಕಾಂಬುದಕೆ

## ಚಕ್ರಾಬ್ಜ ಮಂಡಲದ ವಿವರಣೆ

(ಶ್ರೀ ವಿಜಯದಾಸರ ಕಂಕಣಾಕಾರ ಸುಳಾದಿಯ ಆಧಾರಿತ)

ಸಂಗ್ರಹ ಹಾಗೂ ಸಂಪಾದನೆ:
ಎಂ.ಎಸ್. ಆನಂದರಾವ್
ಎಂ. ಮಧುರಾವ್

ಪ್ರಕಾಶಕರು :
ತೃಪ್ತಿ ಪ್ರಕಾಶನ
(ಎಂ.ಎಸ್. ಆನಂದರಾವ್, ಎ. ಸುಧೀಂದ್ರ ಮತ್ತು ಎ. ರವೀಂದ್ರ)

ಬೆಂಗಳೂರು

2012

# ಸಿದ್ಧ ಸಾಧನ - ಬಿಂಬಕಾಂಬುದಕೆ

## (ಚಕ್ರಾಬ್ಜ ಮಂಡಲದ ವಿವರಣೆ)

ಈ ಕಿರು ಹೊತ್ತಿಗೆ ಮತ್ತು ರೇಖಾವಿನ್ಯಾಸ ಚಿತ್ರಪಟವನ್ನು ಶ್ರೀಮದುತ್ತರಾದಿ ಮಠಾಧೀಶರಾದ **ಪೂಜ್ಯ ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು** ದಿನಾಕ 10-4-1999 ರಂದು ಬಿಡುಗಡೆಗೊಳಿಸಿದರು.


ಪ್ರಥಮ ಮುದ್ರಣ : ಏಪ್ರಿಲ್ - 1999
ಪ್ರತಿಗಳು : 1000
ಎರಡನೆಯ ಮುದ್ರಣ : ನವಂಬರ್ - 1999
ಪ್ರತಿಗಳು : 1000
ಮೂರನೆ ಮುದ್ರಣ : ಆಗಸ್ಟ್ - 2005
ಪ್ರತಿಗಳು : 1000
ನಾಲ್ಕನೆಯ ಮುದ್ರಣ : ಜನವರಿ - 2009
ಪ್ರತಿಗಳು : 1000
ಐದನೆಯ ಮುದ್ರಣ : ಏಪ್ರಿಲ್ - 2012
ಪ್ರತಿಗಳು : 1000





ಬೆಲೆ ರೂ. 40/- (ವರ್ಣರಂಜಿತ ಚಿತ್ರಪಟ ಹಾಗೂ ಕನ್ನಡ ಮತ್ತು ಇಂಗ್ಲೀಷ್ ಕಿರುಹೊತ್ತಿಗೆ ಸಹಿತ)

ಪ್ರಾಜೆಕ್ಟಿನ ರೂಪು ರೇಷೆ ಮತ್ತು ನಿರ್ವಹಣೆ : **ಎಂ. ಎಸ್. ಆನಂದರಾವ್** 080 26645037
**ಎಚ್. ವಿ. ರಂಗನಾಥ** ~~088~~ 080 26590056

ವಿವರ ಸಂಗ್ರಹ ಮತ್ತು ಸಂಪಾದನೆ : **ಎಂ. ಎಸ್. ಆನಂದರಾವ್**

ತಜ್ಞ ಮಾರ್ಗದರ್ಶನ ಮತ್ತು ಸಂಶೋಧನೆ : **ಶ್ರೀ ಶ್ರೀ ಸುವಿದ್ಯೇಂದ್ರತೀರ್ಥ ಶ್ರೀಪಾದಂಗಳವರು**
ಪೂರ್ವಾಶ್ರಮದ - ನ್ಯಾಯ ವೇದಾಂತ ರತ್ನ ವಿದ್ವಾನ್
**ಶ್ರೀ ಜಿ. ಗುರುವೇಂಕಟಾಚಾರ್ಯ** ಎಂ. ಎ.

ಕಂಪ್ಯೂಟರೀಕರಣ : **ಎ. ಸುಧೀಂದ್ರ**

ರೇಖಾ ಚಿತ್ರ ವಿನ್ಯಾಸ : **ಬ್ಲೂ ಚಿಪ್ ಪಬ್ಲಿಷಿಂಗ್**
ಜಯನಗರ,

ಪ್ರಕಾಶನ : **ಎಂ. ಎಸ್. ಆನಂದರಾವ್**, 080 - 26645037
**ಎ. ಸುಧೀಂದ್ರ ಮತ್ತು ಎ. ರವೀಂದ್ರ**
ನಂ. 1, 'ತೃಪ್ತಿ', 5ನೇ ಅಡ್ಡ ರಸ್ತೆ,
ಐ.ಟಿ.ಐ. ಲೇಔಟ್, ಜೆ.ಪಿ.ನಗರ 1ನೇ ಹಂತ,
ಬೆಂಗಳೂರ - 560 078

ಮುಖಪುಟ ಚಿತ್ರ : **ಶ್ರೀ ಶ್ರೀ ಸತ್ಯಧರ್ಮತೀರ್ಥರು**
ಬೃಂದಾವನ - ಹೊಳೆ ಹೊನ್ನೂರು, ಭದ್ರಾವತಿ ತಾ||


(ದೋಷಗಳಿದ್ದಲ್ಲಿ ತಿಳಿಸಿದರೆ ಕೃತಜ್ಞತೆಯಿಂದ ತಿದ್ದಿಕೊಳ್ಳಲಾಗುವುದು)



SRI DIGVIJAYARAMO VIJAYATHE

SRIMAJJAGADGURU MADHWACHARYA MOOLAMAHASAMSTHANA

# UTTARADI MUTT


Head Office :
HALBHAVI PLOT
2nd Cross, Kalyana Nagar
(Behind Railway Station
DHARWAD-580 007
Phone: 347708

Correspondence Office :
No. 4, PAMPA MAHAKAVI ROAD
BASAVANAGUDI
BANGALORE-560 004
Phone : 6611487
6678726


ಅನುಗ್ರಹವಚನ

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠ

Camp :

Date:

ಶ್ರೀ ದಿಗ್ವಿಜಯರಾಮೋ ವಿಜಯತೇ

'ಪೂಜ್ಯಶ್ಚ ಭಗವಾನಿತ್ಥಂ ಚಕ್ರಾಬ್ಜಾದಿಕಮಣ್ಡಲೇ' ಎಂಬುದಾಗಿ ಶ್ರೀಮದಾಚಾರ್ಯರು ತಂತ್ರಸಾರಸಂಗ್ರಹದಲ್ಲಿ ನಿರೂಪಣೆ ಮಾಡಿದ್ದಾರೆ. ಭಗವಂತನನ್ನು ಚಕ್ರಾಬ್ಜಮಂಡಲದಲ್ಲಿ ಇಟ್ಟು ಪೂಜೆ ಮಾಡುವದು ಬಹಳ ವಿಶೇಷ ಫಲದಾಯಕವಾಗಿದೆ. ಜಗವೆಲ್ಲ ವ್ಯಾಪಿಸಿ ನಿಂತ ಪರಮಾತ್ಮನ ದರ್ಶನ ಈ ಚಕ್ರಾಬ್ಜಮಂಡಲದಲ್ಲಿ ಆಗುತ್ತದೆ. ಎಲ್ಲ ತತ್ವಗಳೂ ಹಾಗೂ ಅವರ ಅಭಿಮಾನಿದೇವತೆಗಳು ಮತ್ತು ರಾಶಿ, ನಕ್ಷತ್ರಗಳು, ಈ ಎಲ್ಲ ಕಡೆಯೂ ವ್ಯಾಪ್ತನಾದ ಪರಮಾತ್ಮನ ಚಿಂತನೆಗೆ ಅನುವಾಗುವಂತೆ ಚಕ್ರಾಬ್ಜಮಂಡಲದ ರೂಪ ಚಿತ್ರಣವಿದೆ. ಪುರುಷಸೂಕ್ತ ಬಿಟ್ಟು ಉಳಿದ ಮಹಾಮಂತ್ರಗಳ ಪ್ರತಿಪಾದ್ಯವಾದ ಭಗದ್ರೂಪಗಳು, ಇದರಲ್ಲಿವೆ. ಇಂಥ ಪವಿತ್ರತಮವಾದ ಮಂಡಲದಲ್ಲಿ ನಿಷ್ಕಾಮವಾಗಿ ಭಗವಂತನ ಪೂಜೆ ಮಾಡುವದೂ ಒಂದು ಉತ್ತಮವಾದ ಅಪರೋಕ್ಷಜ್ಞಾನ ಸಾಧನವೇ ಸರಿ. ಇದರ ಬಗ್ಗೆ ಶ್ರೀಮದಾಚಾರ್ಯರು ಸಂಕ್ಷಿಪ್ತವಾಗಿ ತಿಳಿಸಿದ್ದಾರೆ. ವಿಜಯದಾಸರು ತಮ್ಮ ಕಂಕಣಾಕಾರ ಸುಳಾದಿಯಲ್ಲಿ ವಿಸ್ತಾರವಾಗಿ ನಿರೂಪಿಸಿದ್ದಾರೆ. ಅವರ ಆಧಾರದ ಮೇಲೆ 'ನಮ್ಮ ಪಂ. ಗುರುವೆಂಕಟಾಚಾರ್ಯರು ಸುಂದರವಾಗಿ ಸಂಶೋಧನಾತ್ಮಕ ನಿರೂಪಣೆ ಮಾಡಿದ್ದಾರೆ. ಮತ್ತು ಪ್ರಾಚೀನ ಚಿತ್ರಗಳ ಆಧಾರದ ಮೇಲೆ ಸಂಶೋಧಿಸಿದ ಚಿತ್ರವನ್ನು ಮಾಡಿ ಮುದ್ರಿಸಿದ್ದಾರೆ. ಎಮ್. ಎಸ್. ಆನಂದರಾವ್ ಶ್ರೀ ಎಮ್ ಮಧುರಾವ್ ಹೆಚ್. ವ್ಹಿ. ರಂಗನಾಥ, ಮೊದಲಾದವರೆಲ್ಲರೂ ವಿಶೇಷ ಪರಿಶ್ರಮವಹಿಸಿ ಈ ಕಾರ್ಯವನ್ನು ಮಾಡಿ ಭಗವಂತನ ವಿಶೇಷ ಸೇವೆಯನ್ನು ಮಾಡಿದ್ದಾರೆ. ಇದು ಬಹಳ ಅವಶ್ಯಕವಾದ ಕಾರ್ಯವಾಗಿತ್ತು. ಈ ಸೇವೆಯನ್ನು ಮಾಡಿದ ಎಲ್ಲ ಭಗವದ್ಭಕ್ತರಿಗೂ ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲದಿಗ್ವಿಜಯರಾಮವೇದವ್ಯಾಸದೇವರು ಜ್ಞಾನ ಭಕ್ತಿ ವೈರಾಗ್ಯವನ್ನು ಕೊಟ್ಟು ಇನ್ನೂ ಇಂತಹ ಅನೇಕ ಸತ್ಕಾರ್ಯವನ್ನು ಮಾಡುವ ಸಾಮರ್ಥ್ಯವನ್ನು ಕೊಟ್ಟು ~~ಇನ್ನೂ~~ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು
8.4.1999.

इति
श्रीसत्यात्मतीर्थश्रीपादाः
उत्तरादिमठ

ಇತಿ
ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು

# ನಿವೇದನೆ

## ''ಪೂಜ್ಯಶ್ಚ ಭಗವಾನ್ನಿತ್ಯಂ ಚಕ್ರಾಬ್ಜಾದಿಕ ಮಂಡಲೇ....''

ಅಂತರಂಗ ಸಾಧನೆಯ ವಿವಿಧ ಹಂತಗಳಲ್ಲಿರುವ ಮುಮುಕ್ಷುಗಳ ಮೇಲಿನ ಕಾರುಣ್ಯದಿಂದ ದಾಸವರೇಣ್ಯ ಶ್ರೀ ವಿಜಯದಾಸರು ತಂತ್ರಸಾರೋಕ್ತ **ಚಕ್ರಾಬ್ಜಮಂಡಲದ** ವಿವರಗಳನ್ನು ಕಂಕಣಾಕಾರ ಸುಳಾದಿಯ ಮೂಲಕ ಒದಗಿಸಿ ಮಹೋಪಕಾರ ಮಾಡಿದ್ದಾರೆ.

ಈ ಸುಳಾದಿಯ ಚಿತ್ರಣದ ಬಗ್ಗೆ ಈ ಗಾಗಲೇ ಹಲವಾರು ತಜ್ಞರು ಪ್ರಯತ್ನಿಸಿ ಚಿತ್ರಪಟಗಳನ್ನು ಜಿಜ್ಞಾಸುಗಳ ಮುಂದೆ ಇಟ್ಟಿದ್ದಾರೆ.

ಈ ದಿಸೆಯಲ್ಲಿ ಮೊದಲಬಾರಿಗೆ **ಕಂಪ್ಯೂಟರ್ ಯಂತ್ರ** ವಿಜ್ಞಾನವನ್ನು ಬಳಸಿ ಸುಂದರವೂ, ವರ್ಣರಂಜಿತವೂ ಆದ, ಅನೇಕ ವಿವರಗಳಿಂದ ಕೂಡಿದ, ಚಿತ್ರಪಟವು ಒಂದು ಕಿರು ಹೊತ್ತಿಗೆಯೊಂದಿಗೆ ಸಾಧಕರ ಅವಗಾಹನೆಗೆ ತರಲಾಗಿದೆ. ಇದರಲ್ಲಿ ದೋಷಗಳಿದ್ದಲ್ಲಿ ತಿಳಿಸಿದರೆ ಕೃತಜ್ಞತೆಯಿಂದ ತಿದ್ದಿ ಕೊಳ್ಳಲಾಗುವುದು.

ಇಷ್ಟು ಸೊಗಸಾಗಿ ಹೊರಬರಲು ಕಾರಣರಾದವರನ್ನು ಕೃತಜ್ಞತೆಯಿಂದ ಸ್ಮರಿಸುವುದು ಆದ್ಯ ಕರ್ತವ್ಯ. ಶ್ರೀ ಗುರುಗಳ ಆಶೀರ್ವಾದ ತಜ್ಞ ಮಾರ್ಗದರ್ಶನದ ಬೆಂಬಲದಿಂದ ಈ ಚಕ್ರಾಬ್ಜ ಮಂಡಲದ ಚಿತ್ರಪಟ ಎಂಬ ಕುಮುದವು ಅರಳಿ ತಮ್ಮ ಮುಂದೆ ಬಂದಿದೆ. ಭಕ್ತ ಪ್ರಿಯನಾದ ಚಕ್ರಾಬ್ಜಮಂಡಲದ ಧ್ಯೇಯ ಮೂರ್ತಿ ಸ್ವೀಕರಿಸಿ ಪ್ರೀತನಾಗಲೆಂದು ನಮ್ರನಾಗಿ ಆತನಲ್ಲಿ ಯಾಚಿಸುತ್ತೇನೆ.

ಇದರ ಪರಿಪೂರ್ಣತೆಗಾಗಿ ಅವಿಶ್ರಾಂತವಾಗಿ ಶ್ರಮಿಸಿದ ಹಾಗೂ ಎಲ್ಲಾ ಹಂತಗಳಲ್ಲೂ ಸಹಾಯ ಸಹಕಾರ ನೀಡಿದ ಮಹಿಳೆಯರು ಮತ್ತು ಮಹನೀಯರನ್ನೆಲ್ಲಾ ಅಭಿನಂದಿಸಿ ವಂದಿಸುತ್ತೇನೆ.

ಖ್ಯಾತ ವಿದ್ವಾಂಸರೂ ಹಾಗೂ ಪರಿಶೋಧಕರೂ ಆದ ನ್ಯಾಯವೇದಾಂತ ರತ್ನ ವಿದ್ವಾನ್ **ಶ್ರೀ. ಜಿ. ಗುರುವೆಂಕಟಾಚಾರ್ಯ.** ಎಂ. ಎ. ಪೂರ್ಣಪ್ರಜ್ಞ ವಿದ್ಯಾಪೀಠ ಬೆಂಗಳೂರು ಇವರು ತಮ್ಮ ಅನೇಕ ಕಾರ್ಯಭಾರಗಳಲ್ಲೂ ಸಹ ಇದರ ರಚನೆಗೆ ಬಿಡುವು ಮಾಡಿಕೊಂಡು ತಮ್ಮ ತಜ್ಞ ಮಾರ್ಗದರ್ಶನ ನೀಡಿದ್ದಾರೆ. ಇವರಿಗೆ ವಂದಿಸುತ್ತೇನೆ.

ಎಲ್ಲಕ್ಕಿಂತ ಅಧಿಕವಾಗಿ ಕಳಶ ಪ್ರಾಯದಂತೆ ಇದರ ಬಗ್ಗೆ ಆಸಕ್ತಿವಹಿಸಿ ತಮ್ಮ ಅನುಮತಿ ಪ್ರದಾನದಿಂದ ಈ ಚಕ್ರಾಬ್ಜ ಮಂಡಲ ಬಿಡುಗಡೆ ಸಮಾರಂಭವನ್ನು ದಿನಾಂಕ **10-4-99** ರಂದು ದೀಪ ಪ್ರಜ್ವಲನದ ಮೂಲಕ ನೆರವೇರಿಸಿದ ಶ್ರೀಮದುತ್ತರಾದಿ ಮಠಾಧೀಶರಾದ **ಶ್ರೀ ಶ್ರೀ ಸತ್ಯಾತ್ಮ ತೀರ್ಥ ಶ್ರೀಪಾದಂಗಳ** ವರಿಗೆ ಭಕ್ತಿ ಕೃತಜ್ಞತೆಗಳಿಂದ ಪ್ರಣಾಮಗಳನ್ನು ಅರ್ಪಿಸುತ್ತೇನೆ. ಇವರ ಆಶೀರ್ವಾದವೇ ನಮಗೆ ಶ್ರೀರಕ್ಷೆ. ಹಾಗೂ ನಮಗೆ ಅನುಗ್ರಹ ಸಂದೇಶ ಬರೆದು ಕೊಡುವ ಮೂಲಕವೂ ಕೃಪೆ ಮಾಡಿದ್ದಾರೆ.

ಎಲ್ಲರೂ ಶ್ರಮಿಸಿದರೆ ಒಂದು ಸುಂದರ ಸೌಧವು ಸಿದ್ಧವಾಗುವಂತೆ ಜ್ಞಾನ ಪ್ರಚಾರ ರೂಪದ ಈ ಮಹಾ ಸೇವೆಯಲ್ಲಿ ಸಹಯೋಗವನ್ನಿತ್ತ ಮಿತ್ರರೆಲ್ಲರ ಶ್ರಮದ ಫಲವಾಗಿ ಈ ಕಿರು ಹೊತ್ತಿಗೆ ಮತ್ತು ಚಕ್ರಾಬ್ಜಮಂಡಲ ಚಿತ್ರ ಪಟವು ಸರ್ವಾಂಗ ಸುಂದರವಾಗಿ, ಸಾಧಕರ, ಜಿಜ್ಞಾಸುಗಳ ಕೈಸೇರಿದೆ. ಅವಿಶ್ರಾಂತವಾಗಿ ಶ್ರಮಿಸಿದ, ಕಾಲ ಕಾಲಕ್ಕೆ ಉತ್ತೇಜನ ನೀಡುತ್ತಿದ್ದವರನೆಲ್ಲ, ಎಷ್ಟು ಸ್ಮರಿಸಿದರೂ ಸಾಲದು. ಇವರ ಸೇವೆಯಿಂದ ತೃಪ್ತನಾದ ಚಕ್ರಾಬ್ಜ ಮಂಡಲದ ಧ್ಯೇಯಮೂರ್ತಿಯು ಅವರೆಲ್ಲರಿಗೂ ಭಕ್ತಿ, ಜ್ಞಾನಾದಿಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಇಂತಿ

ಸಾತ್ವಿಕ ಜನಸೇವಕ

**ಎಂ. ಎಸ್. ಅನಂದ ರಾವ್**

ಪ್ರಮಾಥಿ, ಚೈತ್ರ ಕೃಷ್ಣನವಮಿ, ಶನಿವಾರ ತಾ|| 10-4-1999.

## ದ್ವಿತೀಯ ಮುದ್ರಣಕ್ಕೆ ಪ್ರಸ್ತಾವನೆ

ಅಂತರಂಗ ಭಕ್ತ ಜಿಜ್ಞಾಸುಗಳ ಸಾಧನೆಯ ಉಪಯೋಗಕ್ಕಾಗಿ ಅಪರೋಕ್ಷ ಜ್ಞಾನಿಗಳಾದ ಶ್ರೀ ವಿಜಯದಾಸ ಕೃತ ಕಂಕಣಾಕಾರಸುಳಾದಿ ಆಧಾರಿತ ರಚಿತವಾದ **ಚಕ್ರಾಬ್ಜಮಂಡಲವು** ಶ್ರವಣ-ದೃಶ್ಯ ಮಾಧ್ಯಮದ ಮೂಲಕ ಪ್ರದರ್ಶನ (Audio-Visual Presentation) ಹಾಗೂ ವರ್ಣ ರಂಜಿತ ಚಿತ್ರಪಟ ಮತ್ತು ಕಿರುಹೊತ್ತಿಗೆಗಳು ಶ್ರೀಮದುತ್ತರಾದಿ ಮಠಾಧೀಶರಾದ **ಶ್ರೀ ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರಿಂದ** 10.4.1999 **ರಂದು** ಬಿಡುಗಡೆ ಹೊಂದಿ, ನ್ಯಾವೇದಾಂತರತ್ನ ವಿದ್ವಾನ್ **ಶ್ರೀ ಜಿ. ಗುರುವೆಂಕಟಾಚಾರ್ಯ** ಎಂ.ಎ. ಇವರ ನಿರೂಪಣೆಗಳೊಂದಿಗೆ, ಬೆಂಗಳೂರು, ಮೈಸೂರು, ಹೈದರಾಬಾದ್ ಮುಂತಾದ ಹಲವಾರು ಕೇಂದ್ರಗಳಲ್ಲಿ ಪ್ರದರ್ಶನಗಳನ್ನು ಹೊಂದಿ ಜನಾನುರಾಗ ಪಡೆದಿರುವುದು ಸಂತೋಷದ ಸಂಗತಿಯಾಗಿದೆ.

ಕೇವಲ ಆರು ತಿಂಗಳುಗಳ ಅವಧಿಯಲ್ಲಿ ಮೊದಲನೆಯ ಆವೃತ್ತಿಯ ಪ್ರತಿಗಳು ಮುಗಿದಿದ್ದರಿಂದ, ಉತ್ತೇಜನಗೊಂಡು ಪುನಃ ಮುದ್ರಿಸಿರುತ್ತೇವೆ. ಅಲ್ಲಲ್ಲಿ ಕಂಡು ಬಂದ ತಪ್ಪುಗಳನ್ನು ಯಥೋಚಿತವಾಗಿ ತಿದ್ದಿರುತ್ತೆ, ವಿದ್ವಾನ್ **ಶ್ರೀ ಗುರುವೆಂಕಟಾಚಾರ್ಯ**ರು ಚಿತ್ರಪಟ ಹಾಗೂ ಕಿರುಹೊತ್ತಿಗೆಯನ್ನು ಪರಿಶೋಧಿಸಿರುತ್ತಾರೆ.

ಈ ಸೇವಾ ಕಾರ್ಯದಲ್ಲಿ ತೊಡಗಿಸಿಕೊಂಡ ಕಾರ್ಯಕರ್ತರನ್ನು ಪುಣ್ಯಭಾಗಿಗಳನ್ನಾಗಿ ಮಾಡಿದ ಗುರುಹಿರಿಯರಿಗೆಲ್ಲ ಭಕ್ತಿಪೂರ್ವಕವಾಗಿ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಇದನ್ನು ಎಂದಿನ ಆಸಕ್ತಿಯಿಂದ ಭಕ್ತರು ಸ್ವೀಕಾರಮಾಡಿ ಚಕ್ರಾಬ್ಜಮಂಡಲದ ಧ್ಯೇಯಮೂರ್ತಿಯ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಸವಿನಯ ಪ್ರಾರ್ಥನೆ.

ಉತ್ಸಾಹಿ ಆಸಕ್ತರ ಅಪೇಕ್ಷೆಯಂತೆ ಕನ್ನಡೇತರ ಜಿಜ್ಞಾಸು ಭಕ್ತರ ಸಾಧನೆಗೆ ಉಪಯೋಗವಾಗುವಂತೆ, ಚಕ್ರಾಬ್ಜಮಂಡಲದ ವರ್ಣರಂಜಿತ ಚಿತ್ರಪಟವನ್ನು **ದೇವನಾಗರಿ ಲಿಪಿಯಲ್ಲಿಯೂ** ಮುಖ್ಯಾಂಶಗಳನ್ನೊಳಗೊಂಡ ಕಿರುಹೊತ್ತಿಗೆಯನ್ನು **ಇಂಗ್ಲೀಷಿನಲ್ಲಿಯೂ** ಮುದ್ರಿಸಿ ತಮ್ಮ ಮುಂದೆ ಇಡಲಾಗಿದೆ.

ಇವನ್ನು ಭಕ್ತ ವೃಂದದವರು ತಮ್ಮದಾಗಿಸಿಕೊಂಡು ತನ್ಮೂಲಕ ನಮ್ಮನ್ನು ಪರಮಾತ್ಮನ ಕೃಪೆಗೆ ಪಾತ್ರರನ್ನಾಗಿ ಮಾಡಬೇಕೆಂದು ವಿನಂತಿ.

ಇಂತಿ

ದಿನಾಂಕ : ನವಂಬರ್ 1999

ಸಾತ್ವಿಕ ಜನ ಸೇವಕ

**ಎಂ.ಎಸ್.ಆನಂದರಾವ್**

## ತೃತೀಯ ಮುದ್ರಣ

**ಶ್ರೀ ಶ್ರೀ ಸುವಿದ್ಯೇಂದ್ರ ತೀರ್ಥ ಶ್ರೀ ಪಾದಂಗಳವರಿಗೆ** ಅರ್ಪಿತ. ಪೂರ್ವಾಶ್ರಮದಲ್ಲಿ **ಶ್ರೀ. ಜಿ. ಗುರುವೆಂಕಟಾಚಾರ್ಯ** ಎಂಬ ಇವರು **'ಚಕ್ರಾಬ್ಜ ಮಂಡಲ'**ವನ್ನು ತಮ್ಮ ನಿರೂಪಣಾ ಕೌಶಲ್ಯದಿಂದ ಭಕ್ತ ವೃಂದದವರಿಗೆ ರಸದೌತಣ ಉಣಬಡಿಸಿದರು.

ಕೃಪೆ ತೋರಿ ಮತ್ತೊಮ್ಮೆ ಶ್ರೀಗಳವರು ರಾಯಚೂರಿನ 'ಪರತತ್ವ ಮಂಟಪ'ದಲ್ಲಿ ಶ್ರವಣ-ದೃಶ್ಯ ಪ್ರದರ್ಶನದ ಮೂಲಕ ನಿರೂಪಿಸಿ ದಿನಾಂಕ 20-8-2005 ಶ್ರೀ ರಾಘವೇಂದ್ರ ಸ್ವಾಮಿಗಳ ಪೂರ್ವಾರಾಧನೆಯಂದು ನೆರೆದವರ ಮನವನ್ನು ಗೆದ್ದಿದ್ದಾರೆ.

ಈ ಶುಭ ಸಂದರ್ಭದಲ್ಲಿ ತೃತೀಯ ಮುದ್ರಣದ ಪ್ರತಿಗಳನ್ನು ಅರ್ಪಿಸಲಾಗುತ್ತಿದೆ. ಎಂದಿನಂತೆ ಸಾಧಕರು ಇದನ್ನು ತಮ್ಮದಾಗಿಸಿಕೊಂಡು ಪ್ರೋತ್ಸಾಹಿಸಬೇಕಾಗಿ ಪ್ರಾರ್ಥನೆ.

### ಚತುರ್ಥ ಮುದ್ರಣ

ಶ್ರೀ ಶ್ರೀ ಸುವಿದ್ಯೇಂದ್ರ ತೀರ್ಥ ಶ್ರೀಪಾದಂಗಳವರ ನಿರಂತರ ಕೃಪಾಶ್ರಯ ಹಾಗು ಅದಮ್ಯ ಉತ್ಸಾಹಿ ಸಾಧಕ ವೃಂದದವರಅಪೇಕ್ಷೆಯಂತೆ ಚತುರ್ಥ ಮುದ್ರಣವನ್ನು ಅರ್ಪಿಸಲಾಗಿದೆ.

ಶ್ರೀ ಗೋಪಾಲ ದಾಸರ
ಪುಣ್ಯ ದಿನ
**18–01–2009**

ಇಂತಿ
ಸಾತ್ವಿಕ ಜನ ಸೇವಕ
ಎಂ.ಎಸ್. ಆನಂದರಾವ್

## ದಾಸವರೇಣ್ಯ ಶ್ರೀ ವಿಜಯದಾಸಾರ್ಯಕೃತ
## ಕಂಕಣಾಕಾರ-ಸುಳಾದಿ

ರಾಗ: ಭೈರವಿ **ಧ್ರುವ ತಾಳ**

ಕಂಕಣಾಕಾರವನು ಬರೆದದರ ಮಧ್ಯೆ
**ಓಂ**ಕಾರ ಎರಡು ಎಡ- ಬಲದಿ ರಚಿಸಿ
ಶಂಕೆಯಿಲ್ಲದೆ ನಡುವೆ **ಘೃಣಿ**ಯೆಂದು ಲಿಪಿಸಿ ಮೀ-
ನಾಂಕನಯ್ಯನ ಪೀಠಸ್ಥಳವಿದೆಂದು
ಬಿಂಕದಲಿ ಸ್ವರದೊಳಗೆ ಕಡಿಯಣಾ ಸ್ವರವೆ ಎರಡಾ
ಲಂಕಾರವನೆ ಮಾಡಿ ಅದರ ಬಳಿಯೆ
ಕಂಕಣಾಕಾರವನ್ನೊಳಮಾಡಿಕೊಂಡು
ಮಂಕುಮತಿಯಾ ತೊರೆದು ತ್ರಿಕೋಣ ಸುತ್ತಿಸಿ
**ಶ್ರೀಂಕಾರ ಇಚ್ಛಾಶಕ್ತಿ ಕ್ಲೀಂಕಾರ ಕ್ರಿಯಾಶಕ್ತಿ**
**ಹ್ರೀಂಕಾರ ಜ್ಞಾನಶಕ್ತಿ** ಮೂರು ಮೂಲೆಗೆ ಬರೆಯೊ
ಪಂಕಜಪಾಣಿಯು **ಶ್ರೀ-ಭೂ-ದುರ್ಗಾ**ನಾಮಕಳು
ಪಂಕಜಾಕ್ಷನ ರೂಪ ಮೂರುವುಂಟು
ಕಂಕಣಾಕಾರ ಮರಳಿ ತ್ರಿಕೋಣ ಮೇಲೆ ಬರೆದು
ಸಂಕೋಚವಾಗಿ ಇದೆ ದ್ವಿತೀಯ ವಲಯ
**ಪಂಕಜಮಿತ್ರ ಸೋಮ ಅಗ್ನಿ ಮಂಡಲ ನಾಗ**
**ಕಂಕಣ** ಅನಲ ವರುಣ ದಿಕ್ಕಿಗೆ ರಚಿಸಿ
ಕಿಂಕರ ಜನಪಾಲ ವಿಜಯ ವಿಠ್ಠಲ ಅಕ
ಳಂಕನ್ನ ಭಜಿಸುವುದು ಹೃದಯದಲಿ ತಿಳಿದು ॥

**ಮಠ್ಯತಾಳ**

**ಕರಿ ಅಜ ರಥ** ವೀಥಿ ಎಂದೆಂಬವೆ ಮೂರು
ಬರೆದು ಇದಕೆ ಹನ್ನೆರಡು ರಾಶಿಗಳು ವಿ-
ಸ್ತಾರವಾಗಿಯೆ ಉಂಟು ಎರಡೆರಡು ಒಂದು ಕಡೆ
ಅರಿದು ಸ್ತಿಮಿತ ಸಮಗತಿ ತ್ವರೆಗತಿಯ ಸೂರ್ಯನ್ನ
ಎರಡು ನಾಲಕು ಕೋಣೆ ವಿರಚಿಸಿ ಅದರ ಮೇಲೆ
ಮರಳಿ **ಮಧು-ಮಾಧವಾ** ಕರೆಸುವಾ ಋತುವೊಂದು
ಬರೆದು ಪ್ರಣವ ವಿವರ್ಣ ಹೃದಯದಲಿ ನಮ-
ಸ್ಕರಿಸು **ಜ್ಞಾನಾತ್ಮ**ನೆಂದು ಧರಿಸು ಈ ಪರಿ ಮೂರು
ಎರಡು ಕೋಣೆಯ ಮಧ್ಯೆ ತರುವಾಯ ಮಾಸ- ಋತು
ವರುಷಕಾರಕನ ಸಂಸ್ಮರಿಸಿ ಕ್ರಮವರ್ಣಗಳ
ಹರಿಯ ಐಶ್ವರ್ಯಾದಿ ಪರಮ ಮೂರ್ತಿಗಳನ್ನು
ಶಿರಸು ಮೊದಲು ಮಾಡಿ ಕರತಲಪದ ತನಕ

ಚರಿತೆಯಾ ಕೊಂಡಾಡು ಗುರುತು ಆರು ಕೋಣೆ
ಸರಿ ಉಪರಿ ಭಾಗ ಎರಡರಾ ಮಧ್ಯೆ
ವರಣಂಗಳುಂಟು ಅರುಹುವೆ ಪ್ರಥಮದಲಿ
ಎರಡೆರಡು ನಾಲ್ಕು - **'ಅಆ, ಕಖ, ಡಢ, ಮಯ'**
ಎರಡನೆಯ ಮನೆಯಲ್ಲಿ ವರಣಗಳಿಪ್ಪವಯ್ಯ
**'ಇಈ, ಉಊ, ಗಘ, ಣತ, ರಲ'**
ಸ್ಮರಿಸು ಮೂರನೆ ಮನೆಯಲಿಪ್ಪ ಮಾತ್ರೆ
**'ಋೠ, ಌೡ , ಙಚ, ಥದ, ವಶ**
ಸರಿಸಿಕೊಂಡವು ಇನಿತು ನಾಲ್ಕನೆ ಸ್ಥಾನದಲಿ
**'ಏಐ, ಛಜ, ಧನ, ಷಸ'**
ವರಣಂಗಳ ಗ್ರಹಿಸು ಐದನೆಯ ಮನೆಯಲ್ಲಿ
**'ಓಔ, ಝಞ, ಪಫ, ಹಳ'**
ನಿರುತ ಇಪ್ಪುದು ಕೇಳಿ ಕಡಿಯಣಾ ಮನೆಯಲ್ಲಿ
**'ಅಂಅಃ, ಟಠ, ಬಭ, ಕ್ಷ'**
ಬರೆದು ಈ ಪರಿಯಲ್ಲಿ ಆರು ಮನೆಯ ಮಧ್ಯ
ಸರಿ ಇಲ್ಲಿಗೆ ಎನ್ನಿ ತರುವಾಯ ನಾಲ್ಕು
ಎರಡು ವಲಯಾಕಾರ ಎರಡು ಕೋಣೆಯ ಗಣಿತ
ನಿರುಕಿಸಿ ಮನದಲ್ಲಿ ಪರಿಶುದ್ಧನಾಗಿ
ಪರಮಪುರುಷ ನಮ್ಮ **ವಿಜಯವಿಠಲ** ಮೂರ್ತಿಯ
ಸ್ಮರಿಸು ಅಜಾದಿಗಳ ನರಸಿಂಹ ಪರಿಯಂತ ॥

**ರೂಪಕತಾಳ**

ಆರು ಕೋಣೆಯ ಮೇಲೆ ವರ್ತುಳಾಕಾರವನು
ಚಾರುವಾಗಿ ಬರೆದು ಅದರ ಸುತ್ತಲು ಎಂಟು
ವಾರಿಜ ದಳವನ್ನು ರಚಿಸಿ ರಮ್ಯವಾಗಿ
**ಸೌರಿ ಸ್ವರ್ಭಾನು ಗುರು ಬುಧ ಶುಕ್ರ ಚಂದ್ರಮ**
**ಧಾರಿಣೀಸುತ ಕೇತು** ಇವರನ್ನೆ ಮಧ್ಯೆ
ಹಾರೈಸಿ ಬರೆದು ಇವರಿವರ ಬಳಿಯಲ್ಲಿ ಓಂ-
ಕಾರ ಸಹಿತವಾಗಿ **ನಮೋ ನಾರಾಯಣಾ**ಯೆಂಬೊ
ಈರೆರಡು ನಾಲ್ಕು ವರ್ಣಗಳು ಒಂದೊಂದರಲಿ
ಆರಾಧಿಸಿ ಬರೆದು ಬೀಜಾಕ್ಷರವನ್ನು
ಸಾರವನ್ನು ತಿಳಿ ಎಂಟು ವರ್ಣಮಿಳಿತ
ತಾರಮಂತ್ರವೆ ಸತ್ಯ ಇದರ ನಿಯಾಮಕ **ವಿಶ್ವ**
**ಮೂರುತಿ** ಮೊದಲಾದ **ಅಷ್ಟ ರೂಪಗಳುಂಟು**
**ಸೌರಿ ರಾಹು** ಮಧ್ಯೆ ಆದಿವರ್ಣವ ಲಿಪಿಸಿ
ದ್ವಿರಷ್ಟ ಮಾತೃಕಾವರ್ಗವೆ ಇದಕೆ ಇಂದಿರಾ

ಮಾರುತ ದೇವನ್ನ ಬರೆದು ಶ್ರುತಿಕಾಲಗಳ
ಈ ರೀತಿಯಿಂದಲಿ ವಿಶ್ವನ್ನ ಸ್ಮರಿಸಿ
ಕಾರುಣ್ಯ ಮಾಡುವನು ಮುಂದೆ ಕ ವರ್ಗ **ಉ-**
ಕಾರ **ತೈಜಸ** ದೇವನ ಬರೆದು ಕ ವರ್ಗಕ್ಕೆ
ಧಾರುಣೀ ಉದಕಾಗ್ನಿ ವಾಯು ಗಗನ ಭೂತ
ಮೂರೆರಡು ಸ್ಥಾಪಿಸೀ ಅಲ್ಲಿ ಮಾನಿಗಳನ್ನು
**ತಾರೇಶ-ಸ್ವರ್ಭಾನು** ಮಧ್ಯದಲ್ಲಿ ಸಿದ್ಧಾ
ಆ **ರೌಹಿಣೇಯ-ಗುರು** ಈರ್ವರ ನಡುವೆ **ಮ-**
ಕಾರ **ಪ್ರಾಜ್ಞ** ಮೂರುತಿ **ಚ**ವರ್ಗ ಒಂದೊಂದಕೆ
ಈರೆರಡು ಮೇಲೊಂದು **ಜ್ಞಾನೇಂದ್ರಿ**ಯಗಳುಂಟು
ವಾರವಾರಕೆ ಬಿಡದೆ ತತ್ವೇಶರುಗಳ ವಾಸ
ತೋರುವ **ತುರ್ಯ**ದೇವನು **ಟ**ವರ್ಗಕ್ಕೈದು
ಮೀರದೆ ಕರ್ಮೇಂದ್ರಿಯ ಪಾಣಿಪಾದಾದಿ ಪಂಚ
ಕಾರಣಿಕರಲ್ಲಿ ವಸ್ವಾದಿ ನಿರ್ಜರರು
ಸಾರಿರ್ಪೆ **ಬುಧ-ಶುಕ್ರ** ಅಂತರಾಳದಲಿ ವಿ-
ಸ್ತಾರವಿದನೇ ತಿಳಿದು **ಶುಕ್ರ-ಚಂದ್ರ**ರ ನಡುವೆ
ಭೋರನ್ನ **ಆತ್ಮಮೂರುತಿ** ಬಿಂದು **ತ**ವರ್ಗ
ಪೂರೈಸು ಪಂಚತನ್ಮಾತ್ರೆಗಳು ಶಬ್ದಾದಿ
ಮಾರುತಗಳೈದು ಪ್ರಾಣಾದಿ ನಾಮದಲಿ
ಸೇರಿಕೊಂಡಿಪ್ಪರೈ ಮುಂದೆ ಲಾಲಿಸಿ ಕೇಳಿ
ಗೌರೀಶನ ಶಿರದಲಿಪ್ಪನ ಕುಜನ ನಡುವೆ
ಮೂರುತಿ **ಅಂತರಾತ್ಮನು ಘೋಷ ಪ**ವರ್ಗ
ಆರನೇ ಮನೆಯೆನ್ನಿ ಇಲ್ಲಿಪ್ಪುದು **ಅಹಂ-**
**ಕಾರ-ಬುದ್ಧಿ-ಚಿತ್ತ-ಮನಸು-ಚೇತನ ತತ್ವ**
ಮಾರಾದಿ ಮಿಗಿಲಾದ ದೇವತೆಗಳಿಕ್ಕು
ಧಾರಿಣೀಸುತ ಕೇತು ಇವರ ಮಧ್ಯದಲ್ಲಿ
ಶ್ರೀರಮಣ ಪರಮಾತ್ಮ **ಶಾಂತ**ವೆಂಬೋದು **ಓಂ-**
ಕಾರದೊಳಗಿನ ವರ್ಣ ಯವರ್ಗ ಚತುರ್ವಿಧಾ
ಆರೊಂದು ಧಾತುಗಳು **ತ್ವಕ್-ಚರ್ಮ-ರಕ್ತಾ**ದಿ
ವಾರಿಜಮಿತ್ರನ್ನ ಮುಸುಕುವನ ಶನಿ ಮಧ್ಯೆ
ಬೀರುವನು **ಜ್ಞಾನಾತ್ಮ ಅತಿಶಾಂತ ಶ** ವರ್ಗ-
ಕಾರ ಸತ್ವ ರಜ ತಮ ತ್ರಯಾವಸ್ಥೆಗಳು
ತಾರ ನಮೋ ನಾರಾಯಣಾಯೆಂಬೊ ಎಂಟು
ಸೌರಿ ಮಿಕ್ಕಾದೆಂಟು ದಳದಲ್ಲಿ ಇರಿಸೋದು
ವಾರಿಜಭವನಯ್ಯ **ವಿಜಯ**ವಿಠ್ಠಲರೇಯ
ಶರೀರದೊಳಗಿದ್ದು ತನ್ನವಗೆ ತಿಳಿಪುವಾ ॥

## 4

### ಝಂಪೆತಾಳ

ಹನ್ನೆರಡು ದಳವುಳ್ಳ ಕಮಲ ವಲಯಾಕಾರ
ಚೆನ್ನಾಗಿ ಬರೆಯುವುದು ಇದರ ಮೇಲೆ
ಇನ್ನು ಒಂದೊಂದು ದಳದೊಳಗೆ ಲಿಪಿಸಲು ಬೇಕು
ಮನ್ನಿಪುದು ಜ್ಞಾನಿಗಳು ಬಾಲಬೋಧ
ಮುನ್ನಾದಿ ದಳದಲ್ಲಿ **ಮೇಷರಾಶಿ**ಯ ಬರೆದು
ಬಿನ್ನಣದಿ '**ಓಂ ಓಂ**' ಇದಕೆ ಕೇಶವಮೂರ್ತಿ
ಭಿನ್ನ ವರ್ಣಂಗಳು '**ಅ ಕ ಡ ಮ**' ವೆಂಬವು ನಾಲ್ಕು
ಇನ್ನಿತು ರಚಿಸೀ ಎರಡನೇ ದಳದಲ್ಲಿ
ಸನ್ನುತಿಸು ವೃಷಭ '**ಆ ಖ ಢ ಯ**' ಚತುರವರ್ಣಗಳು
'**ಓಂ ನಂ**' ನಾರಾಯಣ ಮೂರ್ತಿಯಾ ನೆನೆದು
ಘನ್ನ ಮೂರನೆ ದಳದಿ ಮಿಥುನ ರಾಶಿಯ ಬರೆದು
ವರ್ಣಿಸೀ '**ಓಂ ಮೋಂ**' ಮಾಧವಾ ದೇವನ್ನ
ಗಣ್ಯ '**ಇ ಗ ಣ ರ**' ನಾಲ್ಕು ಮಾತ್ರೆಗಳ ಬರೆದು ನಿಜ-
ವೆನ್ನಿ ನಾಲ್ಕನೆ ದಳಕೆ ಮನಸು ಮಾಡಿ
ಪುಣ್ಯವೇ ಉಂಟು **ಕರ್ಕರಾಶಿ** '**ಈ ಫ ತ ಲ**'
ವರ್ಣಗಳು '**ಓಂ ಭಂ**' ವರ್ಣ್ಯ ಗೋವಿಂದನು
ನಿನ್ನೊಳಗೆ ತಿಳಿವುದೂ ಐದನೇ ಪತ್ರದಲಿ
ಪೆಣ್ಣುಗಳ ಮಧ್ಯದಾ ಪೆಸರಿನಾ ರಾಶಿ
'**ಉ ಊ ಜ ಥ ವ**' '**ಓಂ ಗಂ**' ಇದಕೆ ವಿಷ್ಣುಮೂರ್ತಿ
ಕನ್ನೆಯಲಿ '**ಋ ೠ ಚ ದ ಶ**' '**ಓಂ ವಂ**' ವರ್ಣ ಮಧುಸೂ-
ದನ ದೇವನ ಭಜಿಸು ಷಷ್ಠದಳದಲ್ಲಿ
ಸನ್ಮತವಹುದು ತುಲಾರಾಶಿ '**ಌ ೡ ಛ ಧ ಷ**' ಗಳು
ಇನ್ನು ತ್ರಿವಿಕ್ರಮ '**ಓಂ ತೇಂ**' ಸಪ್ತಮ ದಳದಿ
ಮಣ್ಣು ಭಕ್ಷಿಪ ಕೃಮಿ '**ಏ ಐ ಜ ನ ಸ**' ವರ್ಣ
'**ಓಂ ವಾಂ**' ವಾಮನ ಅಷ್ಟಮ ದಳದಿ
ಹೊನ್ನಿನಂಥ ಮಾತು ಧನು ರಾಶಿ ಲಿಪಿಸೆ ಸಂ-
ಪನ್ನ '**ಓ ಝ ಪ ಹ**' '**ಓಂ ಸುಂ**' ಶ್ರೀಧರ
ಇನ್ನು ನೋಡು ಪತ್ರ ನವಮ ದಳ ಈ ಪರಿ
ಎನ್ನು ಗ್ರಹಿಸುವುದು ಹತ್ತನೆಯ ದಳದಿ
ಇನ್ನಿತಾದರು ಸತ್ಯ '**ಔ ಞ ಫ ಳ**' '**ಓಂ ದೇಂ**'
ಅನ್ನಂತರೂಪಾತ್ಮಕ ಹೃಷೀಕೇಶ
ಹನ್ನೊಂದನೆ ದಳದಲ್ಲಿ ಕುಂಭ '**ಅಂ ಟ ಬ ಕ್ಷ**' '**ಓಂ**'
ಎನ್ನು '**ವಾಂ**' ಇದಕೆ ಶ್ರೀ ಪದ್ಮನಾಭ
ಹನ್ನೆರಡನೇ ದಳದಿ ಮೀನ '**ಅಃ ಠ ಭ**' ವರ್ಣ
ಚೆನ್ನಾಗಿ ರಚಿಸಿ '**ಓಂ ಯಂ**' ದಾಮೋದರ

ಹನ್ನೆರಡು ದಳದೊಳಗೆ ಇಷ್ಟೆ ಭಗವದ್ರೂಪ
ಹನ್ನೆರಡು ಮಾತೃಕೆಯ ಕೂಡಿಸಲು
‘ **ಓಂ ನಮೋ ಭಗವತೇ ವಾಸುದೇವಾಯ** ’ ಪ್ರ-
ಸನ್ನ ದೇವನ್ನ ನೋಡಿ ಏಕಪಂಚಾಶದ್-
ವರ್ಣ ಒಂದೊಂದರಲಿ ಹಂಚಿ ಹಾಕಿ
ಹನ್ನೆರಡು ರಾಶಿಗಳ ಬರೆದು ಸ್ತುತಿಸಿ
ಧನ್ಯನಾಗೆಲೊ ಮುಂದೆ ದಳದ ಸಂಧಿಗಳಲ್ಲಿ
ರನ್ನತಾರ ಯೋಗ ಒಂಭತ್ತು ಪದದಂತೆ
ಹನ್ನೆರಡು ರಾಶಿಗೇ ವಿಭಾಗ ಮಾಡಿ
ಪನ್ನಗಶಾಯಿ ಸಿರಿ ವಿಜಯ ವಿಠಲನ ಕಾ-
ರುಣ್ಯವನು ಪಡೆದು ಚಿಂತಿಸು ಹೃದಯದೊಳಗೆ ॥

## ತ್ರಿವಿಡಿ ತಾಳ

ದ್ವಾದಶದಳವುಳ್ಳ ಕಮಲದಾ ಮೇಲೆ ದ್ವಿ-
ದ್ವಾದಶಪತ್ರದ ಕಮಲ ಬರೆದು ಸಾಧಿಸು
ಒಂದೊಂದು ದಳದ ಮಧ್ಯದಲ್ಲಿ ವಿ-
ನೋದ ಚತುರವಿಂಶತಿ ವರ್ಣಂಗಳ
ವೇದಮಾತಾ ಮಂತ್ರ ಇದೆ ಎನ್ನು ಕೇಶವಾ
ಮಾಧವಾ ಗೋವಿಂದಾದಿ ವರ್ಣಮೂರ್ತಿಗಳ
ಪಾದವೇ ಸ್ಮರಿಸುತ್ತ ಮತ್ತೆ ಸೂರ್ಯನ ಗಮನ
ಭೇದದಿಂದಲಿ ತಿಳಿ ನವವೀಥಿಯ
ಐದಿಸು ಒಂದೊಂದು ಕಡೆ ಮೂರರ ಪ್ರಕಾರ
ಆದಾವಿಲ್ಲಿಗೆ ತಾರೆ ಇಪ್ಪತ್ತೇಳು
ಐದೇಳು ರಾಶಿಗಳು ಹಂಚಿ ಹಾಕಲಾಗಿ
ಪಾದಪಾದಾರ್ಧ ತ್ರಿಪಾದವಹುದು
ಪಾದತ್ರಿಮಂತ್ರ ತತ್ ಸವಿತುರ್ವರೇಣ್ಯಂ ಭ-
ರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾ-
ದಾದಿ ಮೂರುತಿ ನಮ್ಮ ವಿಜಯ ವಿಠ್ಠಲನ ಶ್ರೀ-
ಪಾದವನೆ ನೆರೆನಂಬು ಓಂ ಕಾರ ನುಡಿಯುತ್ತಾ ॥

## ಅಟ್ಟತಾಳ

ಇದರ ಮೇಲೇಕಪಂಚಾಶದ್ದಳವುಳ್ಳ
ಪದುಮವಾ ಬರೆದು ಪ್ರದಕ್ಷಿಣೇ ಮಾಡಿ
ಮುದದಿಂದ ದ್ವಿರಷ್ಟ ಮಿಕ್ಕ ಮೂವತ್ತೈದು
ಇದೆ ಇದೇ ದಳದೊಳು ಲಿಪಿಸಿ ಅಜಾದಿಯ
ವೊದಗಿ ಸ್ತೋತ್ರವ ಮಾಡು ವರ್ಣದೈವತವೆಂದು
ತುದಿಮೊದಲಿದರ ವಿಸ್ತಾರವೆ ಈ ಪರಿ

ಇದೆ ಚಕ್ರಾಂಬುಜವೆಂದು ಕರೆಸುತಿಪ್ಪುದು
ಹೃದಯಾಕಾಶ-ವಾರಿ-ಸ್ಥಂಡಿಲ-ದಹನ-ಸೂರ್ಯ
ವಿಧುಮಂಡಲ ಸಮಸ್ತ ಉತ್ತಮಸ್ಥಾನ
ಇದೆ ನಿರ್ಮಾಣ ಮಾಡಿ ಸತ್ಕರ್ಮದಲಿ ನಿತ್ಯ
ಪದಪದಕೆ ಶ್ರೀಹರಿಯ ಧ್ಯಾನ ಮಾಡಲಿಬೇಕು
ಇದರೊಳು ಏಳುಕೋಟಿ ಮಂತ್ರಾರ್ಥವೆ ಉಂಟು
ಅಧಿದೈವ ಅಧಿಭೂತ ಅಧ್ಯಾತ್ಮವೇ ಉಂಟು
ಅಧಿಕಾರತನ ಭೇದ ತಿಳಕೊಂಬ ಜೀವಿಗಳಿಗೆ
ಸದಮಲಾನಂದ ನಮ್ಮ ವಿಜಯ ವಿಠ್ಠಲರೇಯ
ಬದಿಯಲ್ಲಿ ಇರುತಿಪ್ಪ ಚಕ್ರಾಬ್ಜ ಬಲ್ಲವನಿಗೆ ॥

**ಆದಿತಾಳ**

ಸ್ನಾನ ಉದಕ ಆಚಮನೀಯ ಸಂಧ್ಯಾರ್ಘ್ಯತ್ರಿಪದೆ
ಎಣಿಸುವಾಗ ನಾನಾ ಮಂತ್ರ ಜಪಿಸುವಾಗ
ಮೇಣು ಅರ್ಚನೆ ಪಾವಕಾಹುತಿ ಯಜ್ಞ
ಕ್ಷೋಣಿಸುರರ ಪೂಜೆ ಆತ್ಮಸಂತೋಷ ಅನ್ನ
ಪಾನಾದಿ ಕೊಡುವಾಗ ಇದನೆ ಚಿಂತಿಸಬೇಕು
ಏನೆಂಬೆನಯ್ಯ ಅವ ಅಪರೋಕ್ಷಿ ಎಂದಿಗೇ
ಧ್ಯಾನಸಂಪೂರ್ಣ ಸಿದ್ಧ ಜ್ಞಾನವಂತನಾಹಾ
ಪ್ರಾಣರಾಗಿ ಇಪ್ಪರು ಹರಿ-ಸಿರಿ-ಪ್ರಾಣಾದ್ಯರು
ಕಾಣಿಸಿಕೊಂಬರು ಒಂದೊಂದು ಮಂಡಲದಲ್ಲಿ
ಆನಂದ ಗತಿಗೆ ಸಾಧನ ಬೇಕಾದರೆ
ಮಾನವಾ ಇದನೆ ಕೈಕೊಂಡು ಆಲೋಚಿಸು
ಸ್ಥಾನಸ್ಥಾನಕೆ ನಿನಗೆ ಶುಭವಕ್ಕು ಪುಸಿಯಲ್ಲ
ದೀನನಾಥನಾದ ವಿಜಯವಿಠ್ಠಲರೇಯನ್ನ
ಗಾನವ ಮಾಡಿರೋ ಗ್ರಹಿಸಿ ಈ ಪರಿಯಿಂದ ॥

**ಜತೆ**

ಸಿದ್ಧ ಸಾಧನವಿದು ಬಿಂಬ ಕಾಂಬುವುದಕ್ಕೆ
ಪದ್ಮಾವಲ್ಲಭ ಶ್ರೀ ವಿಜಯವಿಠ್ಠಲ ಪ್ರಾಪ್ತಿ ॥

★★★

ಅಜ್ಞಾನತಿಮಿರಚ್ಛೇದಂ ಬುದ್ಧಿಸಂಪತ್ ಪ್ರದಾಯಕಂ ।
ವಿಜ್ಞಾನವಿಮಲಂ ಶಾಂತಂ ವಿಜಯಾಖ್ಯ ಗುರುಂ ಭಜೇ ॥

★★★

|| ಶ್ರೀಲಕ್ಷ್ಮೀನರಸಿಂಹಾಯ ನಮಃ ||

**ಪೂಜ್ಯಶ್ಚ ಭಗವಾನ್ನಿತ್ಯಂ ಚಕ್ರಾಬ್ಜಾದಿಕಮಂಡಲೇ |**
**ಅಚಲೇ ಹೃದಯೇ ವಾಽಪಿ ಚಲೇ ವಾ ಕೇವಲಸ್ಥಲೇ ||**

''**ಸ್ವವಿಹಿತವೃತ್ಯಾಭಕ್ತ್ಯಾ ಭಗವದಾರಾಧನಮೇವ ಪರಮೋಧರ್ಮಃ**'' ಎಂಬ ಮಾತಿನಂತೆ ಭಗವಂತನ ಆರಾಧನೆಯನ್ನು ನಿತ್ಯದಲ್ಲಿ ಆಚರಿಸಬೇಕಾದುದು ಪ್ರತಿಯೊಬ್ಬರ ಕರ್ತವ್ಯವಾಗಿದೆ. ಈ ಸ್ವವಿಹಿತ ಕರ್ಮಾನುಷ್ಠಾನವೇ ಶ್ರೀ ಹರಿಯ ಪೂಜೆ. ಇದರ ವಿಧಿವಿಧಾನಗಳನ್ನು ತಿಳಿಸಲು '**ತಂತ್ರಶಾಸ್ತ್ರ**'ವೇ ಮುಖ್ಯ ಸಾಧನ. ಇದನ್ನು ಶ್ರೀಮದಾನಂದತೀರ್ಥರು '**ತಂತ್ರಸಾರಸಂಗ್ರಹ**' ಎಂಬ ತಮ್ಮ ಗ್ರಂಥದಲ್ಲಿ ತಿಳಿಸಿಕೊಟ್ಟಿರುವರು. ಪರಮಕರುಣಾಳುವಾದ ಭಗವಂತನು ಚತುರ್ಮುಖ ಬ್ರಹ್ಮದೇವರಿಗೆ ಸಾತ್ವಿಕ ತಂತ್ರಮಾರ್ಗವನ್ನು ನಿರೂಪಿಸುತ್ತಾ ''**ಪೂಜ್ಯಶ್ಚ ಭಗವಾನ್ ನಿತ್ಯಂ ಚಕ್ರಾಬ್ಜಾದಿಕ ಮಂಡಲೇ**'' (1-44) ನಿತ್ಯವೂ ಭಗವಂತನನ್ನು ಚಕ್ರಾಬ್ಜಾದಿ ಮಂಡಲದಲ್ಲಿ ಪೂಜಿಸಬೇಕು ಎಂದು ವಿಧಿಸಿರುವನು. ಭಕ್ತಿಯಿಂದ ಮಾಡುವ ಭಗವಂತನ ಬಾಹ್ಯಪೂಜೆಯು ಶ್ರೇಷ್ಠವಾದುದು. ಈ ಸಾಧನದಿಂದ ಅಂತರಂಗದ ಬಿಂಬಮೂರುತಿ ಶ್ರೀಹರಿಯ ಪೂಜೆಯು ಆಗಿ ಅವನ ಅನುಗ್ರಹಕ್ಕೆ ಪಾತ್ರರಾಗಬಹುದು.

ಶ್ರೀಮದಾಚಾರ್ಯರು ಅತಿಸೂಕ್ಷ್ಮ ಹಾಗೂ ರಹಸ್ಯವಾದ ಚಕ್ರಾಬ್ಜ ಮಂಡಲದ ಲಕ್ಷಣವನ್ನು ''**ಪದ್ಮಂ ವೃತ್ತತ್ರಯಂ ಚಕ್ರಂ ರಾಶಯೋವಿಥಿಕಾಸ್ತಥಾ| ಶೋಭೋಪ ಶೋಭಿಕಾಶ್ಚೈವ ಚಕ್ರಾಬ್ಜಸ್ಯತು ಲಕ್ಷಣಂ ||** ಎಂದು ವಿವರಿಸಿರುವರು. ಇದು ಕಲಶ ಸ್ಥಾಪನಾಕ್ಕೆ ಅನ್ವಯಿಸುವ ಲಕ್ಷಣವಾಗಿದೆ. ಪೂಜಾಲಕ್ಷಣವಾದ ಮಂಡಲದ ಲಕ್ಷಣವನ್ನು ವಿವರವಾಗಿ ಶ್ರೀವಿಜಯದಾಸರ ಕಂಕಣಾಕಾರ ಸುಳಾದಿಯಿಂದ ತಿಳಿಯಬಹುದು.

**ಚಕ್ರಾಬ್ಜಮಂಡಲದ** ಪೂಜೆ ಎಂದರೆ, ಭಗವಂತನ ವಿರಾಟರೂಪದ ಅನುಸಂಧಾನವು. ಬಿಂಬಮೂರುತಿ ಶ್ರೀಹರಿಯನ್ನು ಕಾಣಲು ಇದು ಸಿದ್ಧ ಸಾಧನವಾಗಿದೆ. ಸರ್ವನಿಯಾಮಕ, ಸರ್ವಪ್ರವರ್ತಕ, ಸರ್ವಾಂತರ್ಯಾಮಿ ವಿಶ್ವಾಧಾರಕನಾದ, **ಓಂ** ಕಾರ ವಾಚ್ಯನಾದ, ಜ್ಞಾನಪ್ರದನೂ, ಪರಮಕೃಪಾಪೂರ್ಣನು ಆಗಿ '**ಘೃಣಿ**' ಎಂದೆನಿಸಿದ ಶ್ರೀಹರಿಯ ವೈಭವ ದ್ಯೋತಕವೇ ಚಕ್ರಾಬ್ಜಮಂಡಲವು. ಸಕಲ ಮಂಡಲಗಳಲ್ಲಿ ರಾಜಸ್ಥಾನವನ್ನು ಅಲಂಕರಿಸಿರುವುದಾಗಿ ಈ ಚಕ್ರಾಬ್ಜಮಂಡಲವನ್ನು ಶ್ರೀಮದಾಚಾರ್ಯರು ಉಲ್ಲೇಖಿಸಿ, ಸರ್ವೋತ್ತಮನಾದ ಶ್ರೀಹರಿಯೇ ನಿತ್ಯಾನಿತ್ಯ ತತ್ವಗಳಿಗೆ ನಿಯಾಮಕ ಎಂದು ಸಾರಿ ಈ ರೀತಿಯ ಭಗವದುಪಾಸನೆಯಿಂದ ಬಿಂಬಾಪರೋಕ್ಷ ಪಡೆಯಲು ಸಾಧ್ಯ ಎಂದಿರುವರು. ಭಗವಂತನ ಪ್ರತೀಕವಾದ ಚಕ್ರಾಬ್ಜಮಂಡಲದಲ್ಲಿ ಬ್ರಹ್ಮಾಂಡವೇ ಅಡಕವಾಗಿ, ಶ್ರೀಹರಿಯ ವಿಶ್ವರೂಪದರ್ಶನ ವಾಗುವುದರಲ್ಲಿ ಸಂದೇಹವಿಲ್ಲ. ಅನಂತರೂಪಗಳು ಸಮಸ್ತ ಮಂತ್ರಗಳಿಂದ ಪ್ರತಿಪಾದಿತವಾಗಿ ಸಾಧಕನ ಅನುಸಂಧಾನಕ್ಕೆ ಅನುವಾಗಿ ಭಗವಂತನ ಅನುಗ್ರಹಪಡೆಯಲು ಯೋಗ್ಯವೆಂದೆನಿಸಿದೆ.

ಚಕ್ರಾಬ್ಜಮಂಡಲದ ರಹಸ್ಯ ಪ್ರಮೇಯಗಳನ್ನು ವ್ಯಾಖ್ಯಾನಗಳಿಲ್ಲದೆ ತಿಳಿಯಲು ಸಾಧ್ಯವಿಲ್ಲ. ಸುಜೀವಿಗಳಿಗೆ ಅರ್ಥೈಸುವುದು ಕಠಿಣವಾದ ಸಂದರ್ಭದಲ್ಲಿ ಪರಮ ಕರುಣಾಳುಗಳಾದ,

ದಾಸವರೇಣ್ಯರೆಂದೆನಿಸಿದ ಶ್ರೀ ವಿಜಯದಾಸರು ಕಂಕಣಾಕಾರ (ಚಕ್ರಾಬ್ಜ) ಸುಳಾದಿಯನ್ನು ರಚಿಸಿ **''ಸಿದ್ಧ ಸಾಧನವಿದು ಬಿಂಬಕಾಂಬುವು ಶ್ರೀ ಪದ್ಮಿನಿವಲ್ಲಭ ನಮ್ಮ ವಿಜಯ ವಿಠಲ ಪ್ರಾಪ್ತಿ''** ಎಂದು ಉದ್ಗಾರ ಹಾಡಿದರು. ಸ್ವತಃ ಉತ್ತಮ ವಿದ್ವಾಂಸರಾದ, ಜ್ಞಾನ, ಭಕ್ತಿ, ವೈರಾಗ್ಯಗಳ ಸಾಕಾರಮೂರ್ತಿಯಾದ ಇವರು ವ್ಯಾಸ-ದಾಸವಾಣಿಗಳ ಸಂಗಮವಾಗಿ ಸುಗಮಾಮೃತವೆಂಬ ಈ ಸುಳಾದಿಯನ್ನು ಸುಜನರಿಗೆ ಹಂಚಿರುವರು.

ಇಲ್ಲಿ ಕಾಣಬಹುದಾದ ವಿಜಯದಾಸರ ವಿಚಾರ ಕೌಶಲ, ನಿರೂಪಣೆಯ ನಿಪುಣತೆ, ಮಂಡಲಗಳ ವಿನ್ಯಾಸ, ಸಂದರ್ಭೋಚಿತ ವಿವರಣೆ, ಪ್ರಮೇಯಗಳ ಸಂಗ್ರಹ ಮುಂತಾದುವು ಊಹಾತೀತವಾದದ್ದು. ಇದರಿಂದ ಇವರಲ್ಲಿರುವ ದೈವಭಕ್ತಿ, ತತ್ವನಿಷ್ಠೆ, ಶಿಷ್ಯವಾತ್ಸಲ್ಯ ಮುಂತಾದವುಗಳ ಜೊತೆಗೆ ಇವರ ಮೇಲೆ ಭಗವಂತನ ಅನುಗ್ರಹ ಎಷ್ಟೆಂಬುದು ವೇದ್ಯವಾಗುತ್ತದೆ.

**'ಕಂಕಣಂ ಕರಭೂಷಣಂ'** ಎಂದಾದರೆ ಕಂಕಣಬದ್ಧನಾಗಿ ಕರಗಳಿಂದ ಮಾಡುವ ಭಗವಂತನಪೂಜೆಗೆ ವಿಜಯದಾಸರ ಕಂಕಣಾಕಾರ ಸುಳಾದಿಯು ನಿಜಕ್ಕೂ ಭೂಷಣವಾಗಿದೆ. ಬಾಹ್ಯೋಪಾಸನೆಯಿಂದ ಅಂತರಂಗದ ಬಿಂಬರೂಪಿಯನ್ನು ಆರಾಧಿಸಿದಾಗ, ಭಕ್ತವತ್ಸಲನಾದ ಶ್ರೀಹರಿಯ ಅವನ ಭಕ್ತರನ್ನುದ್ಧರಿಸಲು ಕಂಕಣಕಟ್ಟಿ ನಿಲ್ಲುವನೆಂಬಲ್ಲಿ ಸಂಶಯವಿಲ್ಲ.

ಶ್ರೀಮದಾಚಾರ್ಯರ ಮಾರ್ಗದರ್ಶನದಲ್ಲಿ ವಿಜಯದಾಸರು ತಮ್ಮ ಸುಳಾದಿಯಲ್ಲಿ ಚಕ್ರಾಬ್ಜಮಂಡಲವನ್ನು ರಚಿಸುವ ಹಾಗೂ ಉಪಾಸನೆಯ ವಿಧಿವಿಧಾನಗಳನ್ನು ಹೃದಯಂಗಮವಾಗಿ ವಿವರಿಸಿರುವರು. ನಿರ್ದಿಷ್ಟ ಕ್ರಮವನ್ನನುಸರಿಸಿ ಏಳು ಭಾಗಗಳನ್ನಾಗಿ ವಿಭಾಗಿಸಿ, ವಲಯಗಳ ವಿನ್ಯಾಸ ಕ್ರಮವು ನಿರೂಪಿತವಾಗಿದೆ. ಮತ್ತು ಗ್ರಂಥಾಂತರಗಳನ್ನಾಧರಿಸಿ ಕೆಲವು ಹೆಚ್ಚಿನ ಮಾಹಿತಿಗಳನ್ನು ಸೇರಿಸಲಾಗಿದೆ.

### ಮೊದಲನೆಯ ವಲಯ

ಆರಂಭದಲ್ಲಿ ಬಳೆಯ ಆಕಾರದ ವೃತ್ತವೊಂದನ್ನು ರಚಿಸಿ ಅದರೊಳಗೆ ಎಡಬಲಗಳಲ್ಲಿ **'ಓಂ'** ಕಾರಗಳನ್ನು ಬರೆಯಬೇಕು. ಮಧ್ಯದಲ್ಲಿ **'ಘೃಣಿಃ'** ಎಂದು ಬರೆದು ಮೇಲೆ ಮತ್ತು ಕೆಳಗೆ ಕ್ರಮವಾಗಿ **'ಅಂ ಅಃ'** ಎಂದು ಬರೆಯಬೇಕು. ಈ ಮೊದಲನೆಯ ವಲಯವು ಭಗವಂತನ ಪೂಜಾ ಪೀಠವೆಂದು ಭಾವಿಸಬೇಕು. ಇದು **ಚಕ್ರಾಬ್ಜ ಮಂಡಲದ** ಕೇಂದ್ರವು.

**ಘೃಣಿ** ಎಂದರೆ ಕೃಪಾಲು ಎಂದರ್ಥ. ಭಗವಂತನ ಹೆಸರು. ಕೃಪಾಲುವಾದ ಬಿಂಬ ರೂಪಿಯಾದ ಭಗವಂತನಿಗೆ ಪೂಜೆಯನ್ನು ಸಲ್ಲಿಸಬೇಕು. ಮೇಲೆ ಬರೆದಿರುವ **ಅಂ** ಎಂಬ ಅನುಸ್ವಾರಕ್ಕೆ ನಿಯಾಮಕವಾದ **ಅಂತ** ಎಂಬ ಭಗವದ್ರೂಪವನ್ನು ಮೇಲೆ ಪೂಜಿಸಬೇಕು. **ಅಂತ** ಎಂದರೆ ಸರ್ವೋತ್ತಮ ಎಂದರ್ಥ. ಕೆಳಗೆ ಬರೆದಿರುವ **ಅಃ** ಎಂಬ ವಿಸರ್ಗ ಸ್ವರಕ್ಕೆ ನಿಯಾಮಕವಾದ **ಅರ್ಧಗರ್ಭ** ಎಂಬ ಪ್ರಾಣಧಾರಕ ಎಂದರ್ಥ. ಇವೆರಡು ವಾಗಿಂದ್ರಿಯ ನಿಯಾಮಕ ರೂಪಗಳೂ ಆಗಿವೆ. ಅಂತೂ ಪ್ರಥಮ ವಲಯದಲ್ಲಿ **'ಓಂ'** ಕಾರ ವಾಚ್ಯನಾದ, ಸರ್ವೋತ್ತಮನು, ಪ್ರಾಣನಿಯಾಮಕನು ಮತ್ತು ಕೃಪಾಲುವೂ ಆದ ಬಿಂಬರೂಪಿ ಶ್ರೀ ಹರಿಯನ್ನು ಪೂಜಿಸಬೇಕು.

ಪ್ರಥಮ ವಲಯದಮೇಲೆ ಮೇಲ್ಮುಖವಾದ ಸಮ-ತ್ರಿಕೋಣವೊಂದನ್ನು ಬರೆಯಬೇಕು. ಆ ತ್ರಿಕೋಣದ್ದ ಮೂರು ಮೂಲೆಗಳಲ್ಲಿ ನಮಗೆ ಬಲ ಭಾಗದಲ್ಲಿರುವ ಮೂಲೆಯಿಂದ ಆರಂಭಿಸಿ ಪ್ರದಕ್ಷಿಣಾಕಾರವಾಗಿ **ಶ್ರೀಂ ಕ್ಲೀಂ ಹ್ರೀಂ** ಎಂಬ ಬೀಜಾಕ್ಷರಗಳನ್ನು ಬರೆಯಬೇಕು. ಇವುಗಳು ಕ್ರಮವಾಗಿ **ಶ್ರೀ-ಭೂ-ದುರ್ಗಾ** ರೂಪಗಳ ಬೀಜಮಂತ್ರಗಳು. ಇದರಂತೆ ಕ್ರಮವಾಗಿ **ಇಚ್ಛಾಶಕ್ತಿ-ಕ್ರಿಯಾಶಕ್ತಿ-ಜ್ಞಾನಶಕ್ತಿ** ಎಂದೂ ಬರೆಯಬೇಕು. ಅಂದರೆ ಈ ಮೂರು ರೂಪಗಳಿಂದ ಶ್ರೀ ಭೂ ದುರ್ಗೆಯರು ಬಿಂಬಕ್ಕೆ ಪರಿವಾರ ಭೂತರಾಗಿದ್ದಾರೆಂದು ಭಾವಿಸಬೇಕು. ಈ ರೂಪಗಳಿಗೆ ನಿಯಾಮಕವಾದ ''**ವಿಷ್ಣು**'', ಬ್ರಹ್ಮನಲ್ಲಿರುವ ''**ಬ್ರಹ್ಮ**'', ರುದ್ರನಲ್ಲಿರುವ ''**ರುದ್ರ**'' ರೂಪಗಳನ್ನು ಬರೆಯಬೇಕು. ಇವು ಭಗವಂತನದ್ದೇ ಆದ ರೂಪಗಳು.

ಈ ರೂಪಗಳೇ **ಅನಿರುದ್ಧ, ಪ್ರದ್ಯುಮ್ನ ಮತ್ತು ಸಂಕರ್ಷಣ** ಎಂದೂ ಕರೆಸುತ್ತವೆ. ಈ ರೂಪಗಳೂ ಕೂಡ ಪರಿವಾರ ರೂಪಗಳೇ ಆಗಿವೆ. **ಸ್ವಮೂರ್ತಿ ಗಣ ಮಧ್ಯಗಃ** ಎಂಬಂತೆ ಭಗವಂತನು ತನಗೆ ತಾನೇ ಪರಿವಾರ ರೂಪನಾಗುತ್ತಾನೆ. ಅಥವಾ ಆ ಮೂರು ಲಕ್ಷ್ಮೀ ರೂಪಗಳಿಗೆ ನಿಯಾಮಕವಾದ **ಶ್ವೇತದ್ವೀಪ, ಅನಂತಾಸನ, ವೈಕುಂಠ**ಗತ ರೂಪಗಳನ್ನು ಚಿಂತಿಸಬಹುದು. ಅಥವಾ ಸತ್ವ ಗುಣಾಭಿಮಾನಿ ಶ್ರೀ ನಿಯಾಮಕನಾದ **ಭೂಃ** ಎಂಬ ವ್ಯಾಹೃತಿ ವಾಚ್ಯನಾದ **ವಿಶ್ವ** ಎಂಬ ರೂಪವನ್ನು, ರಜೋಗುಣಾಭಿಮಾನಿ **ಭೂ** ರೂಪ ನಿಯಾಮಕನಾದ **ಭುವಃ** ಎಂಬ ವ್ಯಾಹೃತಿ ವಾಚ್ಯನಾದ **ತೈಜಸ**ನನ್ನೂ, ತಮೋಗುಣಾಭಿಮಾನಿ ದುರ್ಗಾ ನಿಯಾಮಕವಾದ **ಸ್ವಃ** ಎಂಬ ವ್ಯಾಹೃತಿ ವಾಚ್ಯನಾದ **ಪ್ರಾಜ್ಞ**ನನ್ನೂ ಕ್ರಮವಾಗಿ ಚಿಂತಿಸಬಹುದು.

**ಎರಡನೆಯ ವಲಯ**

ಇನ್ನು ತ್ರಿಕೋಣದ ಹೊರಗೆ ದ್ವಿತೀಯ ವೃತ್ತವನ್ನು ಬರೆಯಬೇಕು. ಇದರ ಒಳಬದಿಯಲ್ಲಿ ಐಶಾನ್ಯದಲ್ಲಿ **ಸೂರ್ಯ ಮಂಡಲ**ವನ್ನು, ಆಗ್ನೇಯದಲ್ಲಿ **ಸೋಮ (ಚಂದ್ರ) ಮಂಡಲ**ವನ್ನು ಮತ್ತು ಪಶ್ಚಿಮದಲ್ಲಿ **ಅಗ್ನಿಮಂಡಲ**ವನ್ನು ಬರೆಯಬೇಕು. ಅಲ್ಲಿ **ಲಂ** ವಾಚ್ಯವಾದ ನಾರಾಯಣನನ್ನು, **ರಂ** ವಾಚ್ಯನಾದ ಕೃಷ್ಣನನ್ನು, ಮತ್ತು **ಯಂ** ವಾಚ್ಯನಾದ ನರಸಿಂಹನನ್ನು ಪೂಜಿಸಬೇಕು. ಮತ್ತು **ಚಂದ್ರ ಮಂಡಲ** ಬರೆದ ಬದಿಯಲ್ಲಿ **ಕರಿವೀಥೀ** ನಿಯಾಮಕ ಭಗವಂತನನ್ನು ಚಿಂತಿಸಬೇಕು. **ಕರಿವೀಥೀ** ಎಂದರೆ **ಮೇಷ, ವೃಷಭ, ಮಿಥುನ** ಮತ್ತು **ಕರ್ಕ** ರಾಶಿಗಳು. ಆ ರಾಶಿಗಳಲ್ಲಿ ಸೂರ್ಯನ ಸಂಚಾರ ಆನೆಯ ನಡೆಯಂತೆ ಮಂದ, ಹಗಲು ಹೆಚ್ಚು.

**ಅಗ್ನಿ ಮಂಡಲ** ಬರೆದ ಬದಿಯಲ್ಲಿ **ರಥವೀಥೀ** ನಿಯಾಮಕ ಭಗವದ್ರೂಪವನ್ನು ಚಿಂತಿಸಬೇಕು. **ರಥವೀಥೀ** ಎಂದರೆ **ಸಿಂಹ, ಕನ್ಯಾ, ತುಲಾ** ಮತ್ತು **ವೃಶ್ಚಿಕ** ಈ ರಾಶಿಗಳಲ್ಲಿ ರಥದಂತೆ ಸೂರ್ಯನಗತಿ ಸಮ, ಹಗಲು-ರಾತ್ರಿ ಸಮ.

**ಸೂರ್ಯಮಂಡಲ** ಬರೆದ ಬದಿಯಲ್ಲಿ **ಅಜವೀಥೀ** ನಿಯಾಮಕ ಭಗವದ್ರೂಪವನ್ನು ಪೂಜಿಸಬೇಕು. **ಅಜವೀಥೀ** ಎಂದರೆ **ಧನುಸ್ಸು, ಮಕರ, ಕುಂಭ** ಮತ್ತು ಮೀನ- ಈ ರಾಶಿಗಳಲ್ಲಿ ಸೂರ್ಯನ ಗತಿ ಶೀಘ್ರ. ಹಗಲು ಕಡಿಮೆ-ರಾತ್ರಿ ಹೆಚ್ಚು.

## ಮೂರನೆಯ ವಲಯ

ಇನ್ನು ಎರಡನೆಯ ವಲಯದ ಮೇಲೆ ಷಟ್‌ಕೋಣ ಮಂಡಲವನ್ನು ರಚಿಸಬೇಕು. ಮೇಲಿನ ಕೋಣದಿಂದಾರಂಭಿಸಿ ಪ್ರದಕ್ಷಿಣಾಕಾರವಾಗಿ ಒಂದೊಂದರಲ್ಲಿ ಒಂದೊಂದರಂತೆ ಆರು ಋತುಗಳನ್ನು ಬರೆಯಬೇಕು. ಅಲ್ಲಿ ನಿಯಾಮಕವಾದ ವೇದವ್ಯಾಸಾದಿ ರೂಪಗಳನ್ನು ಚಿಂತಿಸಬೇಕು. ಬಳಿಕ ಹಿಂದಿನಂತೆಯೇ ಒಂದೊಂದು ಕೋಣದಲ್ಲಿ **ಚೈತ್ರ-ವೈಶಾಖ** ಇತ್ಯಾದಿಯಾಗಿ ಎರಡೆರಡು ಮಾಸಗಳನ್ನು ಬರೆದು **ವಿಷ್ಣು-ಮಧುಸೂದನ** ಇತ್ಯಾದಿ ಮಾಸ ನಿಯಾಮಕ ರೂಪಗಳನ್ನು ಚಿಂತಿಸಬೇಕು. ಅನಂತರ ಒಂದೊಂದು ಕೋಣದಲ್ಲಿ ಹತ್ತರಂತೆ ಅರವತ್ತು ಸಂವತ್ಸರಗಳನ್ನು ಬರೆದು ಪೂಜಿಸಬೇಕು. ಬಳಿಕ ಆರು ಕೋಣಗಳಲ್ಲಿ ವಿಷ್ಣು ಷಡಕ್ಷರ ಮಂತ್ರದ ಆರು ಅಕ್ಷರಗಳನ್ನು - **ಓಂ - ವಿಂ; ಓಂ ಷಂ; ಓ ಣಂ.....** ಇತ್ಯಾದಿ ಬರೆದು, ಅದರ ಬದಿಯಲ್ಲಿ **ಪೂರ್ಣ ಜ್ಞಾನಾತ್ಮನೇ ಹೃದಯಾಯ ನಮಃ** ಇತ್ಯಾದಿಯಾಗಿ ಆರು ರೂಪಗಳನ್ನು ಪೂಜಿಸಬೇಕು.

ಒಂದೊಂದು ಮನೆಯಲ್ಲಿ ಬರೆಯಬೇಕಾದ ಅಂಶ ಮುಂದೆ ತಿಳಿಸಿದ ಪ್ರಕಾರವಾಗಿ ನಿಷ್ಪನ್ನ ವಾಗುತ್ತದೆ.

ಪೂರ್ವ ಕೋಣದಲ್ಲಿ

| | | | | |
|---|---|---|---|---|
| ಋತು | : | **ವಸಂತ** | | |
| ಭಗವದ್ರೂಪ | : | **ವೇದವ್ಯಾಸ** | | |
| ಮಾಸಗಳು | : | **ಚೈತ್ರ** | - | **ವೈಶಾಖ** |
| ಮಾಸನಿಯಾಮಕ ರೂಪಗಳು | : | **ವಿಷ್ಣು** | - | **ಮಧುಸೂದನ** |
| ಸಂವತ್ಸರಗಳು - ಹತ್ತು | : | **ಪ್ರಭವ, ವಿಭವ, ಶುಕ್ಲ, ಪ್ರಮೋದ, ಪ್ರಜಾಪತಿ, ಆಂಗಿರಸ್, ಶ್ರೀಮುಖ, ಭಾವ, ಯುವ, ಧಾತೃ** | | |

**ಓಂ 'ವಿಂ' ಪೂರ್ಣಜ್ಞಾನಾತ್ಮನೇ ಹೃದಯಾಯನಮಃ**

ಆಗ್ನೇಯ ಕೋಣದಲ್ಲಿ

| | | | | |
|---|---|---|---|---|
| ಋತು | : | **ಗ್ರೀಷ್ಮ** | | |
| ಭಗವದ್ರೂಪ | : | **ಅನಿರುದ್ಧ** | | |
| ಮಾಸಗಳು | : | **ಜ್ಯೇಷ್ಠ** | - | **ಆಷಾಢ** |
| ಮಾಸನಿಯಾಮಕ ರೂಪಗಳು | : | **ತ್ರಿವಿಕ್ರಮ** | - | **ವಾಮನ** |
| ಸಂವತ್ಸರಗಳು - ಹತ್ತು | : | **ಈಶ್ವರ, ಬಹುಧಾನ್ಯ, ಪ್ರಮಾಥೀ, ವಿಕ್ರಮ, ವೃಷ, ಚಿತ್ರಭಾನು, ಸುಭಾನು, ತಾರಣ, ಪಾರ್ಥಿವ, ಅವ್ಯಯ.** | | |

**ಓಂ 'ಷಂ' ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ**

ನೈರ್ಋತ್ಯ ಕೋಣದಲ್ಲಿ

| | | |
|---|---|---|
| ಋತು | : | **ವರ್ಷ** |
| ಭಗವದ್ರೂಪ | : | **ಪ್ರದ್ಯುಮ್ನ** |

ಮಾಸಗಳು : ಶ್ರಾವಣ - ಭಾದ್ರಪದ
ಮಾಸನಿಯಾಮಕ ರೂಪಗಳು : ಶ್ರೀಧರ - ಹೃಷೀಕೇಶ
ಸಂವತ್ಸರಗಳು - ಹತ್ತು : ಸರ್ವಜಿತ್, ಸರ್ವಧಾರಿ, ವಿರೋಧಿ, ವಿಕೃತಿ, ಖರ, ನಂದನ, ವಿಜಯ, ಜಯ, ಮನ್ಮಥ, ದುರ್ಮುಖ.

ಓಂ 'ಣಂ' ಪೂರ್ಣಪ್ರಭಾತ್ಮನೇ ಶಿಖಾಯೈ ವಷಟ್

ಪಶ್ಚಿಮ ಕೋಣದಲ್ಲಿ

ಋತು : ಶರತ್
ಭಗವದ್ರೂಪ : ಸಂಕರ್ಷಣ
ಮಾಸಗಳು : ಆಶ್ವಯುಜ - ಕಾರ್ತಿಕ
ಮಾಸನಿಯಾಮಕ ರೂಪಗಳು : ಪದ್ಮನಾಭ - ದಾಮೋದರ
ಸಂವತ್ಸರಗಳು - ಹತ್ತು : ಹೇವಿಲಂಬ, ವಿಳಂಬಿ, ವಿಕಾರಿ, ಶಾರ್ವರಿ, ಪ್ಲವ ಶುಭಕೃತ್, ಶೋಭನ, ಕ್ರೋಧಿ, ವಿಶ್ವಾವಸು ಪರಾಭವ.

ಓಂ 'ವೇಂ' ಪೂರ್ಣಾನಂದಾತ್ಮನೇ ಕವಚಾಯ ಹುಂ

ವಾಯವ್ಯ ಕೋಣದಲ್ಲಿ

ಋತು : ಹೇಮಂತ
ಭಗವದ್ರೂಪ : ವಾಸುದೇವ
ಮಾಸಗಳು : ಮಾರ್ಗಶಿರ - ಪುಷ್ಯ
ಮಾಸನಿಯಾಮಕ ರೂಪಗಳು : ಕೇಶವ - ನಾರಾಯಣ
ಸಂವತ್ಸರಗಳು - ಹತ್ತು : ಪ್ಲವಂಗ, ಕೀಲಕ, ಸೌಮ್ಯ, ಸಾಧಾರಣ, ವಿರೋಧಕೃತ್, ಪರಿಧಾವಿ, ಪ್ರಮಾದಿ, ಆನಂದ, ರಾಕ್ಷಸ, ಅನಲ.

ಓಂ 'ನಂ' ಪೂರ್ಣತೇಜ ಆತ್ಮನೇ ನೇತ್ರಾಭ್ಯಾಂ ವೌಷಟ್

ಐಶಾನ್ಯ ಕೋಣದಲ್ಲಿ

ಋತು : ಶಿಶಿರ
ಭಗವದ್ರೂಪ : ನಾರಾಯಣ
ಮಾಸಗಳು : ಮಾಘ - ಫಾಲ್ಗುನ
ಮಾಸನಿಯಾಮಕ ರೂಪಗಳು : ಮಾಧವ - ಗೋವಿಂದ
ಸಂವತ್ಸರಗಳು - ಹತ್ತು : ಪಿಂಗಲ, ಕಾಲಯುಕ್ತ, ಸಿದ್ಧಾರ್ಥಿ, ರೌದ್ರ, ದುರ್ಮತಿ, ದುಂದುಭಿ, ರುಧಿರೋದ್ಗಾರಿ, ರಕ್ತಾಕ್ಷಿ, ಕ್ರೋಧನ, ಕ್ಷಯ.

ಓಂ ಮಃ ಪೂರ್ಣಶಕ್ತ್ಯಾತ್ಮನೇ ಅಸ್ತ್ರಾಯ ಫಟ್

ಹೀಗೆ **ಋತು, ಮಾಸ, ಸಂವತ್ಸರ** ನಿಯಾಮಕ ರೂಪಗಳನ್ನು ಮತ್ತು ಷಡಕ್ಷರ ಪ್ರತಿಪಾದ್ಯ ರೂಪಗಳನ್ನು ಬಿಂಬನಾದ **ಫೃಣಿಗೆ** ಪರಿವಾರತ್ವೇನ ಪೂಜಿಸಬೇಕು.

ಷಟ್ಕೋಣಗಳ ಮೇಲೆ ಮೂರನೆಯ ವೃತ್ತವನ್ನು ಬರೆಯಬೇಕು. ಆಗ ಷಟ್ಕೋಣಮಂಡಲದ ಎರಡೆರಡು ಕೋಣಗಳ ನಡುವೆ ಒಂದೊಂದರಂತೆ ಪುನಃ ಆರು ಮನೆಗಳು ಸಿದ್ಧವಾಗುತ್ತವೆ.

ಮಧ್ಯದ ಈ ಆರು ಮನೆಗಳಲ್ಲಿ ನಾಲ್ಕು ಸುತ್ತಿನಂತೆ, **ಅ, ಆ**.. ಇತ್ಯಾದಿ **ಕ್ಷಂ** ವರೆಗೆ ಐವತ್ತೊಂದು ವರ್ಣಗಳನ್ನು ಹಂಚಿ ಬರೆದು **ಅಜಾದಿ** ರೂಪಗಳನ್ನು ಪೂಜಿಸಬೇಕು.

ಮೊದಲನೆಯ ಸುತ್ತಿನಲ್ಲಿ ವಸಂತ, ಗ್ರೀಷ್ಮ ಋತುಗಳನ್ನು ಬರೆದ ಕೋಣೆಗಳ ಮಧ್ಯದ ಮನೆಯಲ್ಲಿ **ಅ, ಆ**, ಎರಡನೆಯ ಮನೆಯಲ್ಲಿ **ಇ ಈ, ಉ ಊ**, ಮೂರನೆಯ ಮನೆಯಲ್ಲಿ **ಋ ೠ, ಌ ೡ**, ನಾಲ್ಕನೆಯ ಮನೆಯಲ್ಲಿ **ಏ ಐ**, ಐದನೆಯ ಮನೆಯಲ್ಲಿ **ಓ ಔ**, ಆರನೆಯ ಮನೆಯಲ್ಲಿ **ಅಂ ಅಃ**.

ಎರಡನೆಯ ಸುತ್ತಿನಲ್ಲಿ ಒಂದೊಂದು ಮನೆಯಲ್ಲಿ **ಕ ಖ** ಇತ್ಯಾದಿ ಎರಡೆರಡು ಅಕ್ಷರಗಳಂತೆ ಬರೆದರೆ ನಾಲ್ಕು ಸುತ್ತಿನಲ್ಲಿ ಐವತ್ತೊಂದು ಅಕ್ಷರಗಳು ಆರು ಮನೆಗಳಲ್ಲಿ ಹಂಚಿಕೆಯಾಗುತ್ತವೆ.

ಕೊನೆಯ ಮನೆಯ ಕೊನೆಯ ಸುತ್ತಿನಲ್ಲಿ **ಕ್ಷ** ಒಂದೇ ಅಕ್ಷರ ಬರುತ್ತದೆ. ಹೀಗೆ ನಾಲ್ಕು ಸುತ್ತಿನಲ್ಲಿ ಪ್ರದಕ್ಷಿಣಾಕಾರವಾಗಿ ಪರಿವಾರತ್ವೇನ ಇರುವ ಅಜಾದಿ ಐವತ್ತೊಂದು ರೂಪಗಳನ್ನು ಪೂಜಿಸಬೇಕೆಂಬುದು ಕ್ರಮ.

ಆಗ, ಮೊದಲನೆಯ ಮನೆಯಲ್ಲಿ **ಅ ಆ, ಕ ಖ, ಡ ಢ, ಮ ಯ** ಎಂಬ ಎಂಟು ಅಕ್ಷರಗಳು ಮತ್ತು ಎಂಟು ರೂಪಗಳು ಬರುತ್ತವೆ.

ಎರಡನೆಯ ಮನೆಯಲ್ಲಿ **ಇ ಈ, ಉ ಊ, ಗ ಘ, ಣ ತ, ರ ಲ** ಎಂಬ ಹತ್ತು ವರ್ಣಗಳು ಮತ್ತು ಹತ್ತು ಭಗವದ್ರೂಪಗಳು ಬರುತ್ತವೆ.

ಮೂರನೆಯ ಮನೆಯಲ್ಲಿ **ಋ ೠ, ಌ ೡ, ಙ ಚ, ಥ ದ, ವ ಶ** ಎಂಬ ಹತ್ತು ಅಕ್ಷರಗಳು ಮತ್ತು ಹತ್ತು ಭಗವದ್ರೂಪಗಳು ಬರುತ್ತವೆ.

ಹೀಗೆ ನಾಲ್ಕನೆಯ ಮನೆಯಲ್ಲಿ **ಏ ಐ, ಛ ಜ, ಧ ನ, ಷ ಸ** ಎಂಬ ಎಂಟು ವರ್ಣಗಳು ಮತ್ತು ಎಂಟು ಭಗವದ್ರೂಪಗಳು ಬರುತ್ತವೆ.

ಐದನೆಯ ಮನೆಯಲ್ಲಿ **ಓ ಔ, ಝ ಞ, ಪ ಫ, ಹ ಳ**, ಎಂಟು ವರ್ಣಗಳು ಮತ್ತು ಎಂಟು ಭಗವದ್ರೂಪಗಳು ಬರುತ್ತವೆ.

ಆರನೆಯ ಮನೆಯಲ್ಲಿ **ಅಂ ಅಃ, ಟ ಠ, ಬ ಭ, ಕ್ಷ** ಎಂಬ ಏಳು ಅಕ್ಷರಗಳು ಮತ್ತು ಏಳು ಭಗವದ್ರೂಪಗಳು ಬರುತ್ತವೆ.

## ಅಜಾದಿ ನಾರಸಿಂಹಾಂತ ವರ್ಣನಿಯಾಮಕ ಭಗವದ್ರೂಪಗಳು

1. **ಅಂ** ಅಜಾಯ ನಮಃ।
2. **ಆಂ** ಆನಂದಾಯ ನಮಃ।
3. **ಇಂ** ಇಂದ್ರಾಯ ನಮಃ।
4. **ಈಂ** ಈಶಾನಾಯ ನಮಃ।
5. **ಉಂ** ಉಗ್ರಾಯ ನಮಃ।
6. **ಊಂ** ಊರ್ಜಾಯ ನಮಃ।
7. **ಋಂ** ಋತಂಭರಾಯ ನಮಃ।
8. **ೠಂ** ೠಘಾಯ ನಮಃ।
9. **ಲೃಂ** ಲೃಶಾಯ ನಮಃ।
10. **ಲೄಂ** ಲೄಜಯೇ ನಮಃ।
11. **ಏಂ** ಏಕಾತ್ಮನೇ ನಮಃ।
12. **ಐಂ** ಐರಾಯ ನಮಃ।
13. **ಓಂ** ಓ(ಜೋ)ಭೃತೇ ನಮಃ।
14. **ಔಂ** ಔರಸಾಯ ನಮಃ।
15. **ಅಂ** ಅಂತಾಯ ನಮಃ।
16. **ಅಃ** ಅರ್ಧಗರ್ಭಾಯ ನಮಃ।
17. **ಕಂ** ಕಪಿಲಾಯ ನಮಃ।
18. **ಖಂ** ಖಪತಯೇ ನಮಃ।
19. **ಗಂ** ಗರುಡಾಸನಾಯ ನಮಃ।
20. **ಘಂ** ಘರ್ಮಾಯ ನಮಃ।
21. **ಙಂ** ಙಸಾರಾಯ ನಮಃ।
22. **ಚಂ** ಚಾರ್ವಂಗಾಯ ನಮಃ।
23. **ಛಂ** ಛಂದೋಗಮ್ಯಾಯ ನಮಃ।
24. **ಜಂ** ಜನಾರ್ದನಾಯ ನಮಃ।
25. **ಝೂಂ** ಝೂಟಿತಾರಯೇ ನಮಃ।
26. **ಞಂ** ಞಮಾಯ ನಮಃ।
27. **ಟಂ** ಟಂಕಿನೇ ನಮಃ।
28. **ಠಂ** ಠಳಕಾಯ ನಮಃ।
29. **ಡಂ** ಡರಕಾಯ ನಮಃ।
30. **ಢಂ** ಢರಿಣೇ ನಮಃ।
31. **ಣಂ** ಣಾತ್ಮನೇ ನಮಃ।
32. **ತಂ** ತಾರಾಯ ನಮಃ।
33. **ಥಂ** ಥಭಾಯ ನಮಃ।
34. **ದಂ** ದಂಡಿನೇ ನಮಃ।
35. **ಧಂ** ಧನ್ವಿನೇ ನಮಃ।
36. **ನಂ** ನಮ್ಯಾಯ ನಮಃ।
37. **ಪಂ** ಪರಾಯ ನಮಃ।
38. **ಫಂ** ಫಲಿನೇ ನಮಃ।
39. **ಬಂ** ಬಲಿನೇ ನಮಃ।
40. **ಭಂ** ಭಗಾಯ ನಮಃ।
41. **ಮಂ** ಮನವೇ ನಮಃ।
42. **ಯಂ** ಯಜ್ಞಾಯ ನಮಃ।
43. **ರಂ** ರಾಮಾಯ ನಮಃ।
44. **ಲಂ** ಲಕ್ಷ್ಮೀಪತಯೇ ನಮಃ।
45. **ವಂ** ವರಾಯ ನಮಃ।
46. **ಶಂ** ಶಾಂತಸಂವಿದೇ ನಮಃ।
47. **ಷಂ** ಷಡ್ಗುಣಾಯ ನಮಃ।
48. **ಸಂ** ಸಾರಾತ್ಮನೇ ನಮಃ।
49. **ಹಂ** ಹಂಸಾಯ ನಮಃ।
50. **ಳಂ** ಳಾಳುಕಾಯ ನಮಃ।
51 **ಕ್ಷಂ** ಲಕ್ಷ್ಮೀನೃಸಿಂಹಾಯನಮಃ।

ಈ ಅಕ್ಷರ ಮತ್ತು ಭಗವದ್ರೂಪಗಳು **ವಿಷ್ಣು ಷಡಕ್ಷರ** ಮಂತ್ರದ ಅಕ್ಷರಗಳಿಗೆ ಹಾಗೂ ತತ್ ಪ್ರತಿಪಾದ್ಯ ಪೂರ್ಣ ಜ್ಞಾನಾದಿ ರೂಪಗಳಿಗೆ ಸಂಬಂಧಿಸಿದ ರೂಪಗಳಾದ್ದರಿಂದ ಆರು ಕೋಣೆಗಳಲ್ಲಿ ಬರುವ ಋತು - ಮಾಸಗಳಿಗೂ ಸಂಬಧಿಸಿದ ರೂಪಗಳಾದ್ದರಿಂದಲೂ, ಶ್ರೀದಾಸರು ಮೇಲೆ ಕಾಣಿಸಿದಂತೆ ಅವುಗಳನ್ನು ಹಂಚಿದ್ದಾರೆ.

### ನಾಲ್ಕನೆಯ ವಲಯ

ಅನಂತರ ಈ ಮೂರನೇ ವಲಯದ ಮೇಲೆ ಅಷ್ಟದಳ ಪದ್ಮವನ್ನು ರಚಿಸಬೇಕು. ಪೂರ್ವದಳದಿಂದ ಆರಂಭಿಸಿ ಪ್ರದಕ್ಷಿಣಾಕಾರವಾಗಿ **ಶನಿ, ರಾಹು, ಗುರು, ಬುಧ, ಶುಕ್ರ, ಚಂದ್ರ, ಕುಜ** ಮತ್ತು **ಕೇತು** ಎಂಬ ಅಷ್ಟಗ್ರಹಗಳನ್ನು ಗುರುತಿಸಬೇಕು. ಬಳಿಕ ಅದೇ ದಳದಲ್ಲಿ ಕ್ರಮವಾಗಿ **ಓಂ ಓಂ, ಓಂ ನಂ, ಓಂ ಮೋಂ, ಓಂ ನಾಂ, ಓಂ ರಾಂ, ಓಂ ಯಂ, ಓಂ ಣಾಂ,** ಮತ್ತು **ಓಂ ಯಂ** ಎಂಬ ಅಷ್ಟಾಕ್ಷರ ಮಂತ್ರದ ಒಂದೊಂದು ಅಕ್ಷರವನ್ನು ಬರೆಯಬೇಕು. ಆಯಾ ಗ್ರಹ ನಿಯಾಮಕವಾದ ಆಯಾ ಅಕ್ಷರ ಪ್ರತಿಪಾದ್ಯ ವಿಶ್ವಾದಿ ಎಂಟು ರೂಪಗಳನ್ನು - **ಓಂ ವಿಶ್ವಾಯ ನಮಃ** ಇತ್ಯಾದಿಯಾಗಿ ಬರೆದು ಧ್ಯಾನಿಸಿ ಪೂಜಿಸಬೇಕು.

ಅಷ್ಟದಳಪದ್ಮದ ಮೇಲೆ ನಾಲ್ಕನೆಯ ವೃತ್ತವನ್ನು ಬರೆಯ ಬೇಕು. ಆಗ ಎರಡೆರಡು ದಳಗಳ ಸಂಧಿಯಲ್ಲಿ ಒಂದೊಂದರಂತೆ ಎಂಟು ಮನೆಗಳ ನಿರ್ಮಾಣವಾಗುತ್ತದೆ. ಆ ಎಂಟು ಮನೆಗಳಲ್ಲಿ ಓಂ ಕಾರದಲ್ಲಿ ಅಡಗಿದ **'ಅ'ಕಾರ, 'ಉ' ಕಾರ, 'ಮ' ಕಾರ, ನಾದ, ಬಿಂದು, ಘೋಷ, ಶಾಂತ,** ಮತ್ತು **ಅತಿಶಾಂತ**ಗಳಿಂದ ಪ್ರತಿಪಾದ್ಯ ಭಗವದ್ರೂಪಗಳನ್ನು ಉಪಾಸನೆ ಮಾಡಬೇಕು.

1. ಶನಿ ರಾಹುಗಳಿರುವ ದಳಗಳ ಸಂಧಿಯಾಗಿರುವ ಮೊದಲನೆಯ ಮನೆಯಲ್ಲಿ **'ಅ'** ಕಾರವನ್ನು ಬರೆದು ತದ್ವಾಚ್ಯನಾದ **ವಿಶ್ವ**ನನ್ನು ಪೂಜಿಸಬೇಕು. **'ಅ'** ಕಾರದಿಂದ ಅಭಿವ್ಯಕ್ತವಾದ

ಹದಿನಾರು ಸ್ವರಗಳನ್ನು ಬರೆದು **ಅನಂತ ವೇದಗಳು ಕಾಲ, ಅವ್ಯಕ್ತತತ್ವ** ಎಂದು ಬರೆದು ಅವುಗಳಲ್ಲಿ ಹಾಗೂ ತದಭಿಮಾನಿ **ಲಕ್ಷೀ, ಪ್ರಾಣ**ರಲ್ಲಿ ವ್ಯಾಪ್ತನಾದ ನಾರಾಯಣಾತ್ಮಕನಾದ **ವಿಶ್ವನನ್ನು** ಚಿಂತಿಸ ಬೇಕು.

2. **ರಾಹು, ಗುರು**ಗಳಿರುವ ದಳಗಳ ಸಂಧಿಯಾಗಿರುವ ಎರಡನೆಯ ಮನೆಯಲ್ಲಿ '**ಉ**' ಕಾರವನ್ನು ಬರೆದು ತದ್ವಾಚ್ಯನಾದ **ತೈಜಸನನ್ನು** ಪೂಜಿಸ ಬೇಕು. '**ಉ**' ಕಾರದಿಂದ ಅಭಿವ್ಯಕ್ತವಾದ **ಕ, ಖ, ಗ, ಘ, ಙ** ಎಂಬ '**ಕ**' ವರ್ಗವನ್ನು ಬರೆದು **ಪೃಥ್ವೀ, ಅಪ್, ತೇಜಸ್, ವಾಯುಃ, ಆಕಾಶ** ಎಂಬ **ಪಂಚಭೂತಗಳನ್ನು** ಬರೆದು ತದಭಿಮಾನಿಗಳಾದ **ಧರಾ, ವರುಣ, ಅಗ್ನಿ, ಪ್ರವಹವಾಯು ಗಣೇಶರನ್ನು** ಬರೆದು ಇವರುಗಳಲ್ಲಿ **ಶ್ರೀ ಕೃಷ್ಣ, ಹರಿ, ಉಪೇಂದ್ರ, ಜನಾರ್ದನ, ಅಚ್ಯುತ** ರೂಪಗಳಿಂದ ಭಾರ್ಯಾಸಹಿತನಾಗಿ ವ್ಯಾಪ್ತನಾದ '**ಉ**' ಕಾರ ವಾಚ್ಯ **ತೈಜಸನನ್ನು** ಪೂಜಿಸ ಬೇಕು.

3. **ಗುರು, ಬುಧ**ಗಳಿರುವ ದಳಗಳ ಸಂಧಿಯಾಗಿರುವ ಮೂರನೆಯ ಮನೆಯಲ್ಲಿ '**ಮ**' ಕಾರವನ್ನು ಬರೆದು ತದ್ವಾಚ್ಯನಾದ **ಪ್ರಾಜ್ಞನನ್ನು** ಪೂಜಿಸಬೇಕು. '**ಮ**' ಕಾರದಿಂದ ಅಭಿವ್ಯಕ್ತವಾದ **ಚ, ಛ, ಜ, ಝ, ಞ** ಎಂಬ '**ಚ**' ವರ್ಗವನ್ನು ಬರೆದು **ಘ್ರಾಣ, ರಸನಾ, ಚಕ್ಷುಸ್, ತ್ವಕ್, ಶ್ರೋತ್ರ** ಎಂಬ **ಪಂಚ ಜ್ಞಾನೇಂದ್ರಿಯ**ಗಳನ್ನು ಬರೆದು ತದಭಿಮಾನಿಗಳಾದ **ಅಶ್ವಿನೀ, ವರುಣ, ಸೂರ್ಯ, ಅಹಂಪ್ರಾಣ,** ದಿಗ್ದೇವತೆಗಳನ್ನು ಬರೆದು ಇವರುಗಳಲ್ಲಿ **ಶ್ರೀಧರ, ವಾಮನ, ತ್ರಿವಿಕ್ರಮ, ಮಧುಸೂದನ, ವಿಷ್ಣು** ರೂಪಗಳಿಂದ ಪತ್ನೀಸಮೇತನಾಗಿ ನಿಯಾಮಕನಾಗಿ ನೆಲೆಸಿರುವ '**ಮ**' ಕಾರ ವಾಚ್ಯ **ಪ್ರಾಜ್ಞ** ನನ್ನು ಚಿಂತಿಸಿ ಪೂಜಿಸಬೇಕು.

4. **ಬುಧ ಶುಕ್ರ**ಗಳಿರುವ ದಳಗಳ ಸಂಧಿಯಾಗಿರುವ ನಾಲ್ಕನೆಯ ಮನೆಯಲ್ಲಿ '**ನಾದ**' ಎಂದು ಬರೆದು ತದ್ವಾಚ್ಯನಾದ '**ತುರ್ಯ**' ನನ್ನು ಪೂಜಿಸ ಬೇಕು. **ನಾದ**ದಿಂದ ಅಭಿವ್ಯಕ್ತವಾದ **ಟ, ಠ, ಡ, ಢ, ಣ** ಎಂಬ '**ಟ**' ವರ್ಗವನ್ನು ಬರೆದು **ವಾಕ್, ಪಾಣಿ, ಪಾದ ಪಾಯು, ಉಪಸ್ಥ** ಎಂಬ **ಪಂಚ ಕರ್ಮೇಂದ್ರಿಯ**ಗಳನ್ನು ಬರೆದು ತದಭಿಮಾನಿಗಳಾದ **ಅಗ್ನಿ, ದಕ್ಷ, ಜಯಂತ, ಯಮ, ಮಿತ್ರ** ದೇವತೆಗಳನ್ನು ಬರೆದು ಇವರುಗಳಲ್ಲಿ **ಹೃಷೀಕೇಶ, ಪದ್ಮನಾಭ, ದಾಮೋದರ, ಸಂಕರ್ಷಣ, ವಾಸುದೇವ** ರೂಪಗಳಿಂದ ಭಾರ್ಯಾ ಸಮೇತನಾಗಿ ನಿಯಾಮಕನಾಗಿ '**ನಾದ**' ವಾಚ್ಯನಾದ **ತುರ್ಯ**ನನ್ನು ಪೂಜಿಸಬೇಕು.

5. **ಶುಕ್ರ ಚಂದ್ರ**ಗಳಿರುವ ದಳಗಳ ಸಂಧಿಯಾಗಿರುವ ಐದನೆಯ ಮನೆಯಲ್ಲಿ '**ಬಿಂದು**' ಎಂದು ಬರೆದು ತದ್ವಾಚ್ಯನಾದ '**ಆತ್ಮ**'ನನ್ನು ಪೂಜಿಸಬೇಕು. **ಬಿಂದು** ವಿನಿಂದ ಅಭಿವ್ಯಕ್ತವಾದ **ತ, ಥ, ದ, ಧ, ನ** ಎಂಬ '**ತ**' ವರ್ಗವನ್ನು ಬರೆದು **ಶಬ್ಧ, ಸ್ಪರ್ಶ, ರೂಪ, ರಸ, ಗಂಧ** ಎಂಬ **ಪಂಚತನ್ಮಾತ್ರೆ**ಗಳನ್ನು ಬರೆದು ತದಭಿಮಾನಿಗಳಾದ **ಬೃಹಸ್ಪತಿ-ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ** ಎಂಬ ದೇವತೆಗಳನ್ನು ಬರೆದು ಇವರುಗಳಲ್ಲಿ **ಪ್ರದ್ಯುಮ್ನ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ನಾರಸಿಂಹ** ರೂಪಗಳಿಂದ ಪತ್ನೀಸಮೇತನಾಗಿ ನೆಲಸಿರುವ '**ಬಿಂದು**' ವಾಚ್ಯನಾದ **ಆತ್ಮ**ನನ್ನು ಪೂಜಿಸಬೇಕು.

6. **ಚಂದ್ರ ಕುಜ**ಗಳಿರುವ ದಳಗಳ ಸಂಧಿಯಾಗಿರುವ ಆರನೆಯ ಮನೆಯಲ್ಲಿ '**ಘೋಷ**' ಎಂದು ಬರೆದು ತದ್ವಾಚ್ಯನಾದ '**ಅಂತರಾತ್ಮ**'ನನ್ನು ಪೂಜಿಸಬೇಕು. **ಘೋಷ** ದಿಂದ ಅಭಿವ್ಯಕ್ತವಾದ **ಪ, ಫ, ಬ, ಭ, ಮ** ಎಂಬ '**ಪ**' ವರ್ಗವನ್ನು ಬರೆದು **ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನ**

